# ಮೀನಾ ಮದುವೆ



ಪರ್ವತವಾಣಿ



ಛಾಯಾ ಭಂಡಾರ ೯

## ಶ್ರೀ ಪರ್ವತವಾಣಿ:



ಇವರ ಮೊದಲಿನ ಕಾವ್ಯನಾಮ "ಪರ್ವತವಾಡಿ" ಎಂದಾಗಿತ್ತು. ಪ್ರೊ. ಗೋಕಾಕ ರವರು ಒಮ್ಮೆ ಇವರ ನಾಟಕ ವನ್ನು ಪ್ರೇಕ್ಷಿಸಿ ಆನಂದಿಸಿದಾಗ .... "ನಿಮ್ಮ ಕಾವ್ಯನಾಮ 'ಪರ್ವತವಾಣಿ' ಎಂದಿರಲಿ; ಚುಂದ್ದಾಗಿರುತ್ತದೆ" ಎಂದರು. ಅಂದಿನಿಂದ ಪರ್ವತವಾಣಿಯೇ ಸ್ಥಿರವಾಯಿತು.

"ಕರ್ನಾಟಕ ಪ್ರಹಸನ ಪ್ರಪಿತಾಮಹ" ಶ್ರೀ ಕೈಲಾಸಂ ರವರು ಇವರ ನಾಟಕವನ್ನು ನೋಡಿ, "...ನನ್ನ ೨೭ ವರ್ಷದ ಕನಸು ಇಂದು ನೆನಸಾಯಿತು. ನಮ್ಮ ಜನಜೀವನವನ್ನು ಕನ್ನಡಿಸುವಂತಹ ನಾಟಕಗಳನ್ನು ಇನ್ನು ಮುಂದಾದರೂ ಬರೆದು ಆಡಿ ತೋರಿಸುವಂತಹವರೊಬ್ಬರು ಇರುವರೆಂಬುದನ್ನು ನಾನಿಂದು ಕಣ್ಣಿಂದ ನೋಡಿ ಅಮಿತಾನಂದ ಪೂರಿತನಾಗಿದ್ದೇನೆ"ಂದು ನುಡಿದ ಮೇಲೆ ಶ್ರೀ ಪರ್ವತವಾಣಿಯವರ ನಾಟಕಗಳ ವಿಷಯವನ್ನು ಇಲ್ಲಿ ಹೆಚ್ಚಿಗೆ ವಿಸ್ತರಿಸಬೇಕಾದ್ದಿಲ್ಲ.

ಇವರ ನಿಜನಾಮಧೇಯ ಶ್ರೀ ನರಸಿಂಗರಾವ್, ಪರ್ವತವಾಡಿ. ಅಚ್ಚ ಕನ್ನಡಿಗರು. ಮೈಸೂರು ಮಹಾರಾಜಾ ಕಾಲೇಜಿನ ಶಿಕ್ಷಣ ಬಿ. ಎ. (ಆನರ್ಸ್) ಪದವೀಧರರು, ೩೫ ವಯಸ್ಸು, ಸರಳತೆ, ಸೌಜನ್ಯ —ಇವರ ಆಸ್ತಿ. ಕನ್ನಡ ಸಾಹಿತ್ಯ-ರಂಗಭೂಮಿಗಳಿಗೆ ಮಹತ್ತರ ಸೇವೆ ಸಲ್ಲಿಸಿ 'ಪರ್ವತವಾಣಿ'ಯ ಹರ್ಷವನ್ನು ಮನೆಮನೆಗೂ ಹಂಚಿದ್ದಾರೆ. ಇವರ ಹಲವಾರು ನಾಟಕಗಳು ರಂಗಭೂಮಿಯಿಂದಲೂ, ಆಕಾಶವಾಣಿಯಿಂದಲೂ ಪ್ರಸಾರವಾಗಿವೆ. ಇವರ 'ಉಂಡಾಡಿಗುಂಡ' ಎಂಬ ಕೃತಿಯು ಪ್ರಕಟವಾದ ಕೆಲಕಾಲದಲ್ಲಿಯೇ ಅತ್ಯಂತ ಜನಪ್ರಿಯವಾಯಿತು. ಶ್ರೀಯುತರು ಬರೆದಿರುವ ಇತರ ನಾಟಕಗಳೂ ಬೇಗನೆ ಬೆಳಕಿಗೆ ಬಂದು ಕನ್ನಡ ಜನತೆಗೆ ಹರ್ಷವನ್ನುಂಟುಮಾಡಲೆಂದು ಹಾರೈಸುವ—

—ಪ್ರಕಾಶಕರು

—: ಮಾರಾಟಗಾರರು :—

ದಿ ಸ್ಟ್ಯಾಂಡರ್ಡ್ ಬುಕ್ ಡಿಪೋ

ಅವೆನ್ಯೂರೋಡ್, ಬೆಂಗಳೂರು ಸಿಟಿ.

# ಮೊದಲ ಮಾತು



ರೇವತಿಯರಂತೆ ಬೆಳೆದು ನಿಂದಿರುವ ಅವಿವಾಹಿತ ಕನ್ಯೆಯರಿಲ್ಲದ ಮನೆಯೇ ಸಾಮಾನ್ಯವಾಗಿ ಇಲ್ಲವೆನ್ನಬಹುದು. ಇವರ ತಂದೆ ತಾಯಿಯರು ಬೆಳಗಿನಿಂದ ಸಂಜೆ, ಸಂಜೆಯಿಂದ ಬೆಳಗಿನವರೆವಿಗೂ, ಆಫೀಸರಿಗೆ ಉತ್ತರ ಹೇಳುತ್ತಾ, ಅಂಗಡಿಯವನಿಗೆ ಸಮಾಧಾನ ಹೇಳುತ್ತಾ, ಅಡಿಗೆಮಾಡುತ್ತಾ, ಗಡಿಗೆ ಬೆಳಗುತ್ತಾ, "ಅಳಿಯಂದಿರನ್ನು ಹೊಂದಿಸುವುದು ಹೇಗೆ, ಅಳಿಯಂದಿರನ್ನು ಹೊಂದಿಸುವುದು ಹೇಗೆ" ಎಂಬ ಮಂತ್ರವನ್ನು ಜಪಿಸಿ ಜಪಿಸಿ ಯೋಚಿಸಿ ಯೋಚಿಸಿ ನೊಂದು ಕುಂದಿ ಕುಗ್ಗಿ ಸೊರಗಿ ಕೊರಗಿ ಅಕಾಲದಲ್ಲಿ ಅಸಂಖ್ಯಾತವಾಗಿ ನೆರೆಯಾಗುತ್ತಲಿರುವ ತಲೆಗೂದಲುಗಳನ್ನು ಮುಖದ ಮುಂದಿನ ಕನಡಿಗಳಲ್ಲಿ ನೋಡಿಕೊಳ್ಳುತ್ತಿರುವುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಮದುವೆ ಏಕೆ ಆಗದು? ಕೈ ಇಲ್ಲವೇ? ಕೊರಳಿಲ್ಲವೇ? ತಾಳಿ ಇಲ್ಲವೇ? ಲಗ್ನಕ್ಕೆ ವಿಘ್ನಕಾರಕರಾರು?

ಹೆಣ್ಣಿನ ಕಡೆಯವರು ಸಂಪೂರ್ಣವಾಗಿ ಇದಕ್ಕೆ ಕಾರಣರಲ್ಲ ಎಂದು ಹೇಳಲಾಗುವುದಿಲ್ಲ. ಹೈಸ್ಕೂಲು ಮೆಟ್ಟಿಲು ಹತ್ತಿದ ಹೆಣ್ಣು, "crop" ಇಲ್ಲದವನಿಗೆ "consent" ಕೊಡಳು. ಯಾವುದೋ ಒಂದು ಸ್ವತಂತ್ರ ಜೀವನೋಪಾಯ ಹಿಡಿದು ನೂರಾರು ರೂಪಾಯಿ ತರುತ್ತಿದ್ದರೂ "Graduate" ಅಲ್ಲ, ಸರ್ಕಾರಿ ಕೆಲಸವಿಲ್ಲ, ಪೆನ್‌ಷನ್ ಬರುವುದಿಲ್ಲ" ಎಂದು ಅಂತಹ ವರಗಳನ್ನು ಕಡೆಗಣ್ಣಿನಿಂದಲೂ ನೋಡುವುದಿಲ್ಲ. ಆದರೆ ಈ ಗುಂಪು ಬಹಳ ಸಣ್ಣ ಗುಂಪು.

ಎದುರು ಗುಂಪು, ದೊಡ್ಡ ಗುಂಪು. ಗಂಡಿನವರ ಗುಂಪು. ಇವರ ಧೋರಣೆಯೇನು! ದಿಮಾಕೇನು! ಠೇಂಕಾರವೇನು! ಹೇಳತೀರದು.

"ಮೀನಾ ಮದುವೆ", ಎರಡನೆಯ ಗುಂಪಿನವರ ಒಂದು ನಿದರ್ಶನ. ಮೆರೆಯುವರು. ಸೋಲುವರು. ಓದುಗರಿಗೂ, ನೋಡುವವರಿಗೂ 'ಹೀಗಾಗಬಹುದೇ, ಸಾಧ್ಯವೇ?' ಎಂದು ತೋರಬಹುದು. "ಮೀನಾ ವೆಂಕಟಲಕ್ಷ್ಮಿ ವೇಷ ಹಾಕಿಕೊಂಡು ಮರುಳು ಮಾಡಬಲ್ಲಳೇ", ಎಂದು ಶಂಕೆಪಡುವುದಕ್ಕಿಂತ, ಸುಲಭವಾಗಿ ಮಾರ್ಪಡಿಸಿಕೊಳ್ಳಬಲ್ಲ ಬಾಹ್ಯಾಲಂಕಾರ ಇತ್ಯಾದಿಗಳಿಗೇ ಹೆಚ್ಚು ಗಮನಕೊಟ್ಟು ಹೇಗೆ ಆಗಬಹುದಾದ ಒಂದು ಸಂಬಂಧವನ್ನು ಆಗದಾಗಿ ಮಾಡುವರು ಎಂಬುದನ್ನು ತೋರಿಸಿಕೊಡ ಬೇಕೆನ್ನುವುದೇ ಈ ನಾಟಕದ ಹುಟ್ಟಿಗೆ ಕಾರಣ. ಇದರಿಂದ ಪರಿಣಾಮ ಉಂಟೇ ಇಲ್ಲವೇ ಎಂಬುದರ ಗೊಡವೆಗೆ ನಾನು ಹೋಗ ಬಯಸುವುದಿಲ್ಲ. ಬಿಂಕದ ಬೀಗರ ಉದಾರ ಹೃದಯಕ್ಕೇ ಬಿಟ್ಟುಬಿಡುತ್ತೇನೆ.

ಭದ್ರಾವತಿಯ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯ Y. M. L. and D. A. ಸಂಘದವರೂ, ಬೆಂಗಳೂರಿನ ಛಾಯಾ ಕಲಾವಿದರೂ ಅನೇಕ ಬಾರಿ ಈ ನಾಟಕವನ್ನು ರಂಗಮಂಟಪದಲ್ಲಿ ಪ್ರದರ್ಶಿಸಿದ್ದಾರೆ. ಛಾಯಾ ಕಲಾವಿದರು ಮೈಸೂರು ಆಕಾಶವಾಣಿಯಿಂದ ಪ್ರಸಾರ ಮಾಡಿದ್ದಾರೆ. ಇವರಿಗೂ ಮತ್ತು ಈ ಪುಸ್ತಕದ ಪ್ರಕಟನೆಗೆ ನೆರವಾದ ಮಿತ್ರರೆಲ್ಲರಿಗೂ ವಂದನೆಗಳು.

**ಪರ್ವತವಾಣಿ**

---

# ಪಾತ್ರಗಳು

---

| | | |
|---|---|---|
| ಮೀನ | .... | ವಧು |
| ವಿನಾಯಕರಾಯ | .... | ತಂದೆ |
| ಕಮಲಮ್ಮ | .... | ತಾಯಿ |
| ರಾಮು | .... | ವರ |
| ನಾರಣಪ್ಪ | .... | ತಂದೆ |
| ಪಾರ್ವತಮ್ಮ | .... | ತಾಯಿ |
| ಸುಬ್ಬಕ್ಕ | .... | ಪಾರ್ವತಮ್ಮನ ತಾಯಿ |

ಜೋಯಿಸ, ಸಿದ್ದ etc........

(ಎಲ್ಲಾ ಪಾತ್ರಗಳೂ ಕಾಲ್ಪನಿಕ)

ಸ್ಥಳ : ಬೆಂಗಳೂರು

ಕಾಲ—ಭಾಷೆ—ಆಧುನಿಕ

# ಮೀನಾ ಮದುವೆ

## ದೃಶ್ಯ ೧

[ವಿನಾಯಕರಾಯರ ಮನೆ ಮುಂದಿನ ಕೋಣೆ. ಮೀನ ಬಣ್ಣ ಬಣ್ಣದ printed ಸೀರೆಯುಟ್ಟು, ಸೋಟು ತೋಳಿನ ಕುಪಸ ತೊಟ್ಟು, ಸೂಟ್ಕೇ ಕೈಯಲಿ ಓಲೆ ಜುಮಕಿ ಇತ್ಯಾದಿಗಳಿಂದ ಅಲಂಕರಿಸಿಕೊಂಡು ಕಾಲಿಗೆ pump-shoe ಹಾಕಿಕೊಳ್ಳುತ್ತಿರುವಳು. ಸೇವಕ ಸಿದ್ದ ಪ್ರವೇಶಿಸಿ ಬಂದು ಕೋಣೆಕಡೆ ಹೋಗುತ್ತಿರಲು]

ಮೀನ :— ಇನ್ನೂ ಇಲ್ಲೇ ಇದ್ದೀಯೇನೋ ಸಿದ್ದ?

ಸಿದ್ದ :— ಯಾಕ್ರವ್ಮಾ, ಈಟೋತ್ಗೇ ಮನ್ಗೋದ್ರೆ ಸುಮ್ಕಿರ್ತಾರಾ ಅವ್ಮೋರು?

ಮೀನ :— ಮನೇಗಲ್ವೋ, bus-standಗೋ. ಊರಿಗೆ ಬರ್ತಾರೆ ...

ಸಿದ್ದ :— ನನ್ನೊಂಡ್ರೂ? 'ಬತ್ತಿನಿ' ಅಂತೇಳ್ತಾಳ್ನಿದ್ಲು ನಮ್ಮಿಂಗಪ್ಪ ನ್ಸಂಗಾತ ನೆನ್ನೆ. ಇವತ್ಕಾಗ್ಲ ಬರ್ತಾಳೆ, ಬರಾಕಿಲ್ಲ ಅಂತ. ಮಾರೀಜಾತ್ರೆ ಅಂತೇ....ತೌರೂರ್ಗೋಗ್ಬುಟ್ರೆ ಅಂಗೇನ್ರಮ್ಮ

ಮೀನ :— ಅಯ್ಯೋ, ನಿನ್ನ ಹೆಂಡ್ತೀನಲ್ವೋ ನಾನ್ಹೇಳಿದ್ದು! ನಮ್ಮ ಅಣ್ಣಾವ್ರು ಬರ್ತಾರೋ ಈಗ ಮೈಸೂರಿಂದ.

ಸಿದ್ದ :— ಆ? ನಮ್ಕಿಟ್ಟಪ್ಪೋರಾ?

ಮೀನ :— ಹೂ ಕಾಣೋ. ಹೇಳ್ಲಿಲ್ವೇ ನಿನಗವ್ಮಾವ್ರು?

ಸಿದ್ದ :— ಇಲ್ವಲ್ರವ್ಮಾ, ಏಳಿದ್ದಿದ್ರೇ....

ಮೀನ :— ಹೋಗ್ಲಿ ಬಿಡು. ಬೇಗ್ಹೋಗು. (ಕೈಗಡಿಯಾರ ನೋಡಿ) ಹೊತ್ತಾಗ್ಹೋಯ್ತು ಆಗ್ಲೇನೆ.

ಸಿದ್ದ :— ಇಕೋ ಒರ್ಟೆ. ಅವ್ಮೋರ್ಗೇಳ್ಬುಡಿ. (ಬೀದಿ ಬಾಗಿಲು ಸೇರಿ) ಓ, ರಾಯ್ರೂ ಬಂದ್ರು ...ಗಾಡಿ ಬಂತ್ರವ್ಮಾ ...(ನಿಷ್ಕ್ರಮಿಸುವನು)

ವಿ. ರಾ :— (ಅವಸರದಿಂದ ಪ್ರವೇಶಿಸಿ) ಆ....ಎಲ್ಲಿ, ಆಯ್ತೇನಮ್ಮ ಮೀನ?

ಓಹೊ ಹೊ ಹೊ ಹೊ ಭೇಷ್ ಭೇಷ್ ಭೇಷ್. First class ಆಗ್ಹೋಯ್ತು ಬಿಡು. ಎಲ್ಲಿ, ಅವ್ಳೆಲ್ಲಿ ?

ಮೀನ :— ಒಳಗೆ ಬೇರೆ ಸೀರೆ ಉಟ್ಕೋತಾ ಇದಾಳೆ. **ಅಮ್ಮಾ !**

ವಿ. ರಾ : — (ಒಳಬಾಗಿಲಕಡೆ ಹೋಗುತ್ತಾ) ಸರಿ. ಇವಳು ಆ ಹದಿನೆಂಟುಮಳ ಸುತ್ಕೊಳ್ಳೋದ್ರೊಳ್ಗೆ ನಾವ್ ಹದಿನಾಲಕ್ಲೋಕ ಪ್ರದಕ್ಷಿಣೆ ಹಾಕ್ಕೊಂಡ್ಬರ ಬಹುದು. (ಹೊಸಿಲು ಸೇರಿ) **ಲೇ ! ಏನೇ ಮುಗೀಲಿಲ್ವೇನೇ ನಿನ್ನಲಂಕಾರ ಇನ್ನೂನೂ ? ಮದ್ವೆ ಹುಡ್ಗೀಗಿಂತ ನಿಂದೇ ಅಸಾಧ್ಯವಾಗ್ಹೋಯ್ತಲ್ಲ !** (ಕಮಲು ಬಾಗಿಲಲ್ಲಿ ಕಾಣಿಸಿಕೊಳ್ಳಲು) ಓ, ಬಂದ್ಯಾ, ಹೊತ್ತಾಗ್ಹೋಯ್ತು, ನಡಿ.

ಕಮಲು :— ಗೊತ್ತು ಗೊತ್ತು ನಂಗೂ ಗೊತ್ತಿದೆ. (ಉಡಿ ಸೆಕ್ಕಿಸಿ ಕೊಳ್ಳುತ್ತಾ) ಗಾಡಿ ಬಂತೇನು ?

ವಿ. ರಾ :— ಗಾಡೀನೂ ಬಂತು, ಕುದ್ರೇನೂ ಬಂತು, ಸಾರಥೀನೂ ಬಂದಿದಾನೆ. ನೀನು ಈಚೆಗೆ ಬಾ ಸಧ್ಯಕ್ಕೆ........ಆ ಸೆಂಗು ನೆರಿಗೆ ಎಲ್ಲಾ ಸರಿಯಾಗಿದೆ ಬಿಡೇ.

ಕಮಲು :— ಸುಮ್ನಿರೀಂದ್ರೆ ಸಾಕು. ಚೆನ್ನಾಗ್ಮಾತಾಡ್ತೀರಿ. ಆದೆ.

ವಿ. ರಾ :— ನನ್ಮಾತು ಚೆನ್ನಾಗಿರೋದ್ಹಾಗಿರ್ಲಿ, ನಿನ್ಹಣೇಗೆ ಕುಂಕುಮ ಹಚ್ಕೋ ಮೊದ್ಲು.

ಕಮಲು :— ಮೀನಾ, ಕುಂಕುಮಾನೇ ಹಚ್ಕೊಂಡಿಲ್ವೇನೇ ?

ವಿ. ರಾ :— ಇನ್ನೂ ಯಾರನ್ನಾದ್ರೂ ಕರೀಲೇನು ಸಾಕ್ಷೀಗೆ ?........ ಆ ಮುಖಕ್ಕೆ rose powder puff ಮಾಡ್ಕೊಳ್ಳೋ ಗಲಾಟೆ ಒಳಗೆ, ಹಣೇಗೆ red powder ••• (ಕಮಲು ಮುರುಗುಟ್ಟಿ ನೋಡಲು) ನೀನ್ನನ್ನಾಮೇಲೆ ನುಂಗುವಿ ಯಂತೆ ನಿಧಾನ್ವಾಗಿ....ಹುಂ....

ಕಮಲು :— (Dressing table ಮುಂದೆ ಕುಳಿತು ಕುಂಕುಮವಿಟ್ಟುಕೊಳ್ಳುತ್ತಾ) ಜೋಯಿಸ್ರಲ್ಲೀಗ್ಬಂದಿರ್ತಾರೆತಾನೇ ?

ವಿ. ರಾ :— ಬಂದಿರ್ತಾರೆ ಕಾಣೇ.

**ಕಮಲು** :— ಆ ಹುಡುಗ, ಅದೇನೋ "ಮದ್ವೆ ಈಗ್ಲೇ ಬೇಡ, ಮದ್ವೆ ಈಗ್ಲೇ ಬೇಡ" ಅಂತಿರ್‍ತಾನೆ ಅಂದಿದ್ರಲ್ಲಾ, ಮನೇಲೇ ಇರು ಅಂತ ಹೇಳಿರ್‍ತಾರೆ ತಾನೇ ?

**ವಿ. ರಾ** :— ಇಲ್ವೇ, ಅವನ್ನ ಮನೇಬಿಟ್ಟು ಆಚೆಗೆ ಹೊರಡ್ಸಿ, ನಮ್ಮನ್ನ ಹುಡ್ಗೀನ್ಕರ್‍ಕೊಂಡ್ಬರ್‍ಹೇಳಿದಾರೆ !

**ಕಮಲು** :— ಅಯ್ಯೋ, ಒಳ್ಳೇ ಚೆನ್ನಾಗ್ಮಾತಾಡ್ತೀರಲ್ಲ ಅಂದ್ರೇ. ಹೊರಡೋವೇಳೇನೇ ಹೀಗೆ ಶಿಡಿ ಶಿಡೀಂತಿದ್ರೆ ಬಲು ಲಕ್ಷಣ.

**ವಿ. ರಾ** :— ಅಲ್ವೇ, ಈಗ ರಾಹುಕಾಲ ಬಂದ್ಬಿಡುತ್ತೆ, ಅಷ್ಟ್ರಲ್ಹೊರಟ್ಬಿಡ್ಬೇಕು ಅಂದ್ರೆ.....

**ಜಟ್ಕಾವಾಲ** :— (ಹೊರಗಿಂದ) **ಕ್ಯಾ ಸೋವೆಂ !**

**ವಿ. ರಾ** :— ಅಗೋ ಆಹ್ವಾನ!

**ಕಮಲು** :— ಸರಿ, ನಿಮಗೆ ಸರಿಯಾಗೇ ಇದಾನೆ ನಿಮ್ಮ ಶಿಷ್ಯ. ನಡಿಯಮ್ಮ ಮೀನ. ನೋಡು, ಅಲ್ಲಿ ಅವ್ರೇನಾದ್ರೂ ಕೇಳ್ಗೀಳಿದ್ರೆ, ಸಮಾಧಾನ್ವಾಗಿ ಉತ್ತರ ಹೇಳು. ಎಷ್ಟಾದ್ರೂ ಗಂಡ್ಸೋರು. ಅಲ್ದೆ ಜೋಯಿಸ್ರು ಪೂರ್ವಕಾಲದವರೂಂತ್ಬೇರೆ ಹೇಳಿದಾರೆ.

**ವಿ. ರಾ** :— ಲೇ, ನಿನ್ನ ಉವಾಚ ಎಲ್ಲಾ ಜಟ್ಕಾಲ್ಕೂತ್ಕೊಂಡ್ಹೋಗ್ತಾ ರಸ್ತೆ ಉದ್ದಕ್ಕೂ ಆಗ್ಲೇ....ಹೊತ್ತಾಗ್ಹೋಗುತ್ತೇ.

**ಕಮಲು** :— ಸಾ——ರಿ. ಯಾರೂಗ್ಗ ಇಲ್ಲದ ಅವಸರ ನಿಮಗಾಗ್ಹೋಗಿದ್ಯೆಲ್ಲಾ. ನಡಿ ಮೀನ ಹೋಗ್ಲಿ. (ಬಾಗಿಲು ಸೇರಿ ಗಂಡನನ್ನು ಹಿಡಿದು ನಿಲ್ಲಿಸಿ) ಅಯ್ಯಯ್ಯೋ, ಇದೇನ್ಹೂಂದ್ರೇ ಅನ್ಯಾಯ ? ಹೆಣ್ಣ್ನೋಡೋಕ್ಹೋಗೋದೂ, ಮೂರೇಜನ ಹೊರಟ್ಬಿಟ್ಟದೇವಲ್ಲ ?

**ವಿ. ರಾ** :—**ಓ ೯ ೯ ೯ ೯ ೯ ! ಗಾಡ್ಯೋನೂ ಸೇರಿ ನಾಲಕ್ಕಾಗುತ್ತೇ ಬಾರೇ ! ನನ್ನ ಅಪಶಕುನದ ಅರಗಿಣೀ ಬಾ !** (ಅವಳ ಕೈಹಿಡಿದೆಳೆದೊಯ್ಯುವನು. ಮೀನ ಹಿಂಬಾಲಿಸುತ್ತಿರಲು)

— ತೆರೆ —

## ದೃಶ್ಯ ೨

[ರಸ್ತೆ. ಕಿಟ್ಟಿ ಮತ್ತು Hold-all ಹೊತ್ತಿರುವ ಸಿದ್ಧ ಪ್ರವೇಶಿಸುವರು]

**ಕಿಟ್ಟಿ** :— ಮೀನ ಅವ್ರು ಸ್ವಸ್ಥವಾಗಿದಾರೇನೋ ?

**ಸಿದ್ದ** :— ಉ ಸೊಮೇ.... ಸೊಮೇ.

**ಕಿಟ್ಟ** :— ಏನೋ ?

**ಸಿದ್ದ** :— ನಮ್ಮೀನವ್ರೋರ ಲಗ್ನಕ್ಕೆ ದೊಡ್ರಾಯ್ರು ಅವ್ರೋರೂ ಬೋವದ್ದಾಡ್ತಾರೆ ಈಗ ಸಬ ಎಲ್ಲೋ ಓಗೌರೆ ಗಾಡ್ಯಾಗೆ, ಗಂಡೋರ್ ಮನೇಗೆ.

**ಕಿಟ್ಟ** :— ಓ. ಯಾರ್ಮನೇಗೆ ಗೊತ್ತೇನೋ ?

(ರಾಮು ಹಿಂದಿನಿಂದ ನುಗ್ಗಿ, ಕಿಟ್ಟಿಯನ್ನು ತಳ್ಳಿಕೊಂಡು ಮುಂದುವರಿಯಲು)

ಲೇ ಲೇ ಲೇ ರಾಮು !

**ರಾಮು** :— (ಹಿಂತಿರುಗಿ ಕಿಟ್ಟಿಯನ್ನು ಗುರ್ತಿಸಿ) ಓ, ಕಿಟ್ಟಿ ! ಅಲೆ.

**ಕಿಟ್ಟ** :—ಹೌದು, ಕಿಟ್ಟೀನೇ. ಅಲ್ವೋ, ಇದೇನೋ ಇದು ಸುಂಟರಗಾಳಿ ಹೊಡ್ಕೊಂಡ್ಹೋದ್ಹಾಗ್ಹೋಗ್ತಾ ಇದ್ದೀಯಲ್ಲೋ, ರಸ್ತೇಲಿದ್ದೋರ್ನೆಲ್ಲಾ ಉರ್ಳ್ಸಿಕ್ಕೊಂಡು! ಸ್ವಲ್ಪ ಹುಷಾರಾಗಿಲ್ದೆ ಇದ್ದಿದ್ರೆ ಸಾಷ್ಟಾಂಗಾಸನ ಹಾಕಿಸ್ಬಿಡ್ತಾ ಇದ್ದಿಯಲ್ಲೋ, ನೆಲದ್ಮೇಲೆ ?

**ರಾಮು** :— ಹ ಹ ಹ, I am sorry, ಅವಸರದಲ್ಲಿ ಹೊರ್ಟಿದ್ದೆ. ನೀನು ಈಗ್ಬಂದ್ಯೇನು ?

**ಕಿಟ್ಟ** :— ಈಗ್ತಾನೇ ಇಳೀತಾ ಇದ್ಯೆಯ್ಯಾ ಸವಾರಿ. ಸಿದ್ಧಾ, ನೀನು ಹಾಸ್ಗೆ ತೊಗೊಂಡ್ಹೋಗೋ ಮನೇಗೆ, ನಾನ್ಬರ್ತೀನೆ.

**ಸಿದ್ದ** :— ಊ ಸೊಮೇ. (ನಿಷ್ಕ್ರಮಿಸುವನು)

**ಕಿಟ್ಟ** :— ಇನ್ನೇನಯ್ಯಾ ಸಮಾಚಾರ ?

**ರಾಮು** :— ಏನಿಲ್ಲಪ್ಪ, ಹ್ಯಾಗ್ಮಾಡಿದ್ದೀಯೆ ಪರೀಕ್ಷೇಲಿ ?

**ಕಿಟ್ಟಿ** :— ನಮ್ದೇನಿದ್ದೇ ಇದ್ಯೆಲ್ಲೋ, ಮಾಮೂಲು ಮೂರ್ನೇಕ್ಲಾಸ್ passengers ಉ. ಅಷ್ಟಕ್ಕೆ ಪ್ರೋತ ಇರೊಲ್ಲ. Hall tickets ತೊಗೊಂಡಾಗ್ಲೇ ನಮ್ಮ ಸೀಟ್ಸ್ book ಮಾಡ್ಕೊಂಡ್ಬಿಡ್ತೇವೆ. ನಿನ್ಹಾಗೇನೋ First classಗ್ಳು ಸಿಗ್ಬ್ಯೋದಿಕ್ಕೆ ?

**ರಾಮು** :— ನಾನು ? First classಉ ? ಈ ಸಾರಿ ? ಸಿಗ್ದ ! ಸಧ್ಯಕ್ಕೆ pass ಉ ಅಂತಾದ್ರೆ ಉಳೀತು ಮರ್ಯಾದೆ.

**ಕಿಟ್ಟಿ** :— ಯಾಕೋ, ಏನ್ಬಂತೋ ನಿನಗಿದ್ದಕ್ಕಿದ್ಹಾಗೆ ?

**ರಾಮು** :— ನೋಡೋ, ನೀನು Hostelಲ್ಲಿ ಯಾರ ಕೈಗೂ ಸಿಗ್ದೆ, ಯಾರಾತಂಕವೂ ಇಲ್ದೆ, ಸುಖವಾಗಿದ್ಬಿಟ್ಟೆ.

**ಕಿಟ್ಟಿ** :— ಆಹಾ. ಅಪ್ಪ ಕಳಿಸ್ತಿದ್ದ ಅರವತ್ರೂಪಾಯ್ನೂ ಅರ್ಧಗಳಿಗೇಲಿ ಅರಗಿಸ್ಕೊಂಡು, ಅವಿಯಲ್ಲು ಅಂಬೋಡೆ ಮಜ್ಜಿಗೆ ಘಳಿಧ್ಯ ಪಟ್ಕಾಗ್ಹೊಡ್ಕೊಂಡು, Super Talkiesಉ, ಸಾತೂ ತೌರ್ಮನೆ ಅಂತ ಸುಖವಾಗಿದ್ಬಿಟ್ಟೆ.

**ರಾಮು** :— ಅದೇ ನಾನೂ ಹೇಳಿದ್ದು. ಇಲ್ಲಿ ನನ್ಗೋ ಈ ಮದ್ವೆ ಅವಾಂತ್ರ ವಕ್ರಿಸಿ, ಹೆಣ್ಹಡೆದ ಪುಣ್ಯಾತ್ಮರು ಭಂಡೀ ತುಂಬಾ ಕನ್ಯಾಸ್ತ್ರಗಳ್ನ ತುಂಬ್ಕೊಂಡ್ಬಂದು "ಜಾತ್ಕಕೊಡಿ, ಹುಡ್ಗೀನ್ನೋಡಿ" ಅಂತ್ಹುಚ್ಹಿಡಿಸ್ತಾ ಇದಾರೆ. ನನ್ಗೋ ಇನ್ನೂ ಈಗ್ಲೇ ಮದ್ವೆ ಬೇಡಾಅಂತ, ನಮ್ಮಪ್ಪ ಅವ್ನೋ..

**ಕಿಟ್ಟಿ** :— ಮೊಮ್ಮಕ್ಳ ದರ್ಶನ ಎಂದಾದೀತೂ, ಅವರ್ಗೇನ್ಹಿಸ್ಬಿಟ್ಟೇವೂ ಅಂತ....

**ರಾಮು** :— ನೋಡಿದ್ಯಾ, ಈ ಹಣೇಬರಹ ನಮ್ಮದಿಲ್ಲಿ.

**ಕಿಟ್ಟಿ** :— ಹೋಗ್ಲಿ. First Class ಅಂತೂ ಹೋಯ್ತು, ಹೆಣ್ಣಾದ್ರೂ ಯಾವ್ದಾದ್ರೂ ಗೊತ್ತಾಯ್ತೇನು ?

**ರಾಮು** :— ಸಧ್ಯಕ್ಕಿನ್ನೂ ಯಾವ್ದೂ ಇಲ್ಲ. ಈಗ್ಯಾರೋ ಮನೇಗೆ ಹುಡ್ಗೀನ ಕರ್ಕೊಂಡ್ಬರ್ತಾರಂತೆ. ಮನ್ಲೇ ಇರೂಂತಂದ್ಲು Motherಉ. ನನಗ್ಯಾಕೋ ರೇಗ್ಹೋಯ್ತು. ಹೇಳ್ದೆ ಕೇಳ್ದೆ ಹೊರಟ್ಬಿಟ್ಟೆ; ಯಾವ್ದಾದ್ರೂ ಸಿನೀಮಾ ನೋಡ್ಕೊಂಡು....

ಕಿಟ್ಟಿ :— ಬದುಕ್ದೆ ಸಧ್ಯಕ್ಕೆ. ಸಿನೀಮಾತಾನೇ ? ನೀನ್ಹೇಳಿದ ತರಹ ನೋಡಿ ಕೆರೇನೋ ಕುಂಟೇನೋ ಅಂತಿದ್ದೆ. ಲೋ ರಾಮು, hero ಅಂದ್ರೆ ನೀನ್ಯಾಕ್ಹೋ hero.

ರಾಮು :— Hero ?

ಕಿಟ್ಟಿ :— ಹೂನೋ. ಈಗ್ನಿಮ್ಮನೇಗ್ಬರೋ ಹುಡ್ಗಿ ಈ "ಪ್ರಾಣಕಾಂತ ಇವತ್ತು ಮೊದಲ್ನೇಸಾರಿ ನನ್ನೋಡ್ತಾನೆ ; ಎಲ್ಲಾದಿವ್ಸಕ್ಕಿಂತ ಇವತ್ತಾನ್ ಚೆನ್ನಾಗ್ಕಾಣ್ಬೇಕು ; ಈಗ 'ಒಲ್ಲೆ' ಅನ್ನಿಸ್ಕೋಬಾರ್ದು" ಅಂತ ಇಲ್ಲದ ಪ್ರಯಾಸ ಪಟ್ಟು ಸಿಂಗರಿಸ್ಕೊಂಡು ಹೋಗಿ, ನೀನು ಮಂಗಮಾಯವಾಗಿರೋದನ್ನ ತಿಳಿದ ತಕ್ಷಣ ತನ್ನ ಮನಸ್ಸಿನ ರಾಜಮಹಲ್ ತಾಜಮಹಲ್ಲಾಗಿ ಕಣ್ಣಲ್ಲಿ ಜಲಪಾತ ಹರಿಸ್ತಾಳೆ, 'ಹೀಗ್ನೋಡ್ದೇನೇ ತಿರಸ್ಕರಿಸ್ಕೊಳ್ಳೋ ಅಷ್ಟ್ ಕನಿಷ್ಟವೇ ನಾನು' ಅಂತ ಕೊರಗಿ. Act heroicಉ, Actor ನೀನು hero !

ರಾಮು :— ಮಾಡೋ, ಮಾಡೋ ಹಾಸ್ಯ. ನಿನ್ನ ಕಾಶ್ಮೀರದ Shawl ಒಳಗಿರೋ "Bata" ಅಂಗಡಿ ನನಗೆ ಕಾಣಿಸ್ಲಿಲ್ಲ ಅಂತಿದ್ದೀಯೇನು ? ಅವಳು ಬರ್ತಾಳೆ, Disappoint ಆಗಿ ನೀನ್ಹೇಳಿದ್ಹಾಗೆ ಅತ್ತೂ ಅಳ್ತಾಳೆ ಅಂತ ನಂಗೂ ಗೊತ್ತೋ.

ಕಿಟ್ಟಿ :— ಓಹೋ, ಗೊತ್ತಿದ್ದೂ ಓಡಿಬಂದ್ಯೇನು ? ಹಾಗಾದ್ರೆ ನೀನು hero ಅಲ್ಲ, villainಉ !

ರಾಮು :— ಕಿಟ್ಟಿ !

ಕಿಟ್ಟಿ :— ರಾಮು ! "ಗಂಡು" ಅನ್ನೋ ಕೊಬ್ಬು ಕಟ್ಟಿಟ್ಬಿಡೋ. ಅವಳು ನಿಮ್ಮನೇಗೆ ಬರೋಕೆ ನಿನ್ನದೊಂದೇ qualificationಉ. ಸಾಲದ್ದಕ್ಕೆ ಪದ್ಧತಿ. ರಾಮಾಯಣದ ಕಾಲದಲ್ಲಿ ರಾಮರಾವಣ ಎಲ್ಲಾ ಸೀತೆ ಇದ್ದಲ್ಲೇ ಹೋದ್ರು; ತಮ್ಮ ಶಕ್ತೀನ್ತೋರ್ಸಿ ಮೆಚ್ಚುಗೆ ಪಡೆದ್ರು ; ಅರ್ಜುನ ಕರ್ಣನೂ ಅಷ್ಟೇ ; ದ್ರುಪದರಾಜನಿಗೆ not-paid ಕಾಗದ ಹಾಕ್ಲಿಲ್ಲ, 'ದ್ರೌಪದೀನ ನಮ್ಮನೇಗೆ ಕರ್ಕೊಂಡ್ಬನ್ನಿ , ನಾನೂ ನಮ್ಮ ತಾಯಿ ಅವ್ರು ನೋಡ್ಬೇಕು' ಅಂತ.. ಅವ್ರೇ ಹೋದ್ರು. Fools ಕಾಣೋ ಅವ್ರು. ನಾವು Civilised people.

ನಾಗರೀಕತೆ ತುಂಬಾ ಹೆಚ್ಚಾಗಿದೆ. ಹೆಂಗ್ಸಿನ್ಮನೇಗೆ ನಾವ್ಹೋದೇವೇ? ಗಂಡಸ್ರು? ಅವಳ್ನೇ ಕರೆಸ್ತೇವೆ.

ರಾಮು :— ಇಲ್ವ್ಪೋ, ಅವಳ್ನ ಕರೆಸೋದ್ಬೇಡ್ವ್ಪೋ. ನಾವ್ಹೋಡೋದೇ ಬೇಡ ಅವಳ್ನ. ಹೇಗ್ಬೇಕಾದ್ರಿದ್ಕೊಳ್ಳಿ, ತಾಳಿ ಕಟ್ಬಡು.

ಕಿಟ್ಟಿ :— ನಿನ್ನ ನೋಡ್ಬೇಡ ಅಂತ್ಹೇಳ್ಹೋರ್ಯಾರೋ? ಓಡಿ ಯಾಕೋ ಬಂದಿ? ನಿನ್ಮನಸ್ಸಿಗೆ ಹ್ಯಾಗ್ಬೇಕೂಂತಿದೆಯೋ ಹಾಗೆ ಇವಳು ಬರೋಳು ಇಲ್ಲ ಅಂತ ನಿನಗೆ ಯಾರಾದ್ರೂ ಜ್ಯೋತಿಷ್ಯ ಹೇಳಿದಾರೇನೋ ?

ರಾಮು :— ಉ ಹುಹು ...ನನಗೆ....ನಾನ್ಹೇಳಿದ್ನಲ್ಲೋ, ಈಗ್ಲೇ ಬೇಡ ಅಂತ್ಹೇಳೀ....ನೋಡಪ್ಪಾ days badಉ....ನಮ್ಮ ಪರೀಕ್ಷೆ ಇನ್ನೂ ಈಗ್ತಾನೇ ಮುಗ್ದಿದೆ. Results ಬಂದೂ, pass ಆಗಿ, ಕೆಲ್ಸ ಸಿಕ್ಕಿ, ಹುಡ್ಗಾಟಾನೇನೋ? ಕ್ರಾಪ್cutಗೆಂಟಾಣೆ ಹೊಂದಿಸ್ಕೊಳ್ಳೋದೇ ಕಷ್ಟ, ಈಗಿನ್ಕಾಲ, ಹೆಂಡ್ತೀಗೆ ಕಾಮಿನಿಯಾಯಿಲ್ ತಂದ್ಕೊಡೋ ಬಗೆ ಹೇಗೋ ?

ಕಿಟ್ಟಿ :— ಓಹೋ, Unemployment problem ಓ ? ನಿರುದ್ಯೋಗದ ಪಿಶಾಚೀನ ಓಡ್ಸೋಕೆ ಮದ್ವೇನೇ ಅಲ್ವೇನೋ ಮಹಾ ಮಂತ್ರ? ಹೆಣ್ಣು ಕೊಟ್ಟ ತಪ್ಗೆ ಮಾವ ಅನ್ನಕ್ಕೂ ದಾರೀ ಮಾಡೇಮಾಡ್ತಾನೋ! ಈಗ ನಾಲಕ್‌ಪಂಕ್ತಿ ಬರಿಯೋಕೆ ಬರ್ದಿ ಇರೋ probationer ಪ್ರಭೃತಿಗಳ merit ಏನು ? "ಮಗಳ ಗಂಡ"! ಇಷ್ಟಕ್ಕೂ ನೀನೇನ್ ನಿಮ್ಮತ್ತೆಮಾವನ ಕೈತುತ್ತಿಗೆ ಕಾಯ್ಬೇಕಾಗಿಲ್ವಲ್ಲ? ನಿಮ್ಮಪ್ಪ ಶಾನುಭೋಗರಾದ್ರೂ ಬೇಕಾದ್ಹಾಗಿಟ್ಟಿದಾರಾಸ್ತೀನ. ನೀನೊಬ್ನೇ ಸುಪುತ್ರ. ಕೌರವೇಶ್ವರ & Brothers Unlimited ಅನ್ನೋ ಹಾಗೇನಿಲ್ಲ.

ರಾಮು :— ಅದ್ನಿಜ ಅನ್ನು. ನನ್ಗೇನೂ ಭಯ ಇಲ್ಲ

ಕಿಟ್ಟಿ :— ಸರಿ, ಬಾಕಿಯೋರ ವಿಚಾರ ಕಟ್ಕೊಂಡು ನಿನ್ಗೇನು? ಹೋಗ್ಮನೇಗೆ. ನೋಡು ಹುಡ್ಗೀನ. ಮನಸ್ಸಿಗೊಪ್ಗೆ ಆದ್ರೆ 'ಹು' ಅನ್ನು. ಇಲ್ಲವಾದ್ರೆ 'ಇಲ್ಲ' ಅನ್ನು. ಅವ್ಳೇನ್ ನಿನ್ನ ಕಟ್ಕೊಂಕೋಲ್ಲ. ನೀನ್ಹೀಗೋಡ್ಬಂದಿರೋದು ಆ poor girlಗೆ insultಉ; ನಮ್ಮ ಗಂಡಸ್ sexಗೇ ಅವಮಾನ:

ನಿನ್ನಂಥಾ graduate ಇನ್ನ produce ಮಾಡಿದ collegeಗೆ ಕೆಟ್ಟೆಸ್ರು. ಹೋಗು. ಇದು lectureಗೆ ಸಮಯವಲ್ಲ. ಇಲ್ದಿದ್ರೆ ನಿನ್ನ–ಹೋಗ್ಲಿ ಬಿಡು. ಮದ್ವೆಮಾತಿನ ಮಧ್ಯೆ ಕೆಟ್ಮಾತ್ಬೇಡ. Behave like a good boy. ನಾನೂ ಮನೇಗ್ಹೋಗಿ change ಮಾಡ್ಕೊಂಡ್ಬಂದ್ಬಿಡ್ತೇನೆ Result ಏನಾಯ್ತು ಹೇಳು Happyಯಾಗಿದ್ರೆ ಒಟ್ಗೆ Cinema ಗ್ಹೋಗೋಣ. ಏನು ?

ರಾಮು :— ಕಿಟ್ಟಿ....ಹೋಗ್ಲಿ ...ನೀನೂ ಹೀಗೇ ಬಂದ್ಬಿಡೊ ...ನೀನೂ ನೋಡುವಿಯಂತೆ.

ಕಿಟ್ಟಿ :— ನಾನೇ ? No. No ! ಆ ಹುಡುಗಿ ಸಾರ್ವಜನಿಕರ ಕಣ್ಮುಂದೆ ತನ್ನ beautyನ parade ಮಾಡೋಕೆ ಬರ್ತಾ ಇಲ್ಲ. ಮುಖ್ಯವಾಗಿ ನೀವು ಒಬ್ರನ್ನೊಬ್ರು ನೋಡ್ಬೇಕು. ನೋಡಿ Telescope ಹಾಕ್ಕೊಂಡ್ನೋಡಿ. Microscope ಹಾಕ್ಕೊಂಡ್ನೋಡಿ. ಬಾಕಿ ಯಾರ್ಗೇನ್ ಅಧಿಕಾರವೂ ಇಲ್ಲ. ನಿಮಗೊಪ್ಗೆ ಆದ್ರೆ, ಭೂಮದ timeನಲ್ಲಿ ಪಕ್ಕ ಪಕ್ಕಲ್ಕೂತ್ಕೊಂಡೂಟ ಮಾಡ್ತಿರೋದನ್ನ, ನಾವೂ ಊಟಮಾಡ್ತಾ ನೋಡ್ತೇವೆ. ಆ ಸಂತೋಷ ನಮಗೆ ಸಿಗಲಿ ಅಂತ ಆಶಿಸಿ ನಿನ್ನ ಮನೇಗೆ, ತಳ್ತೇನೆ, ನಡಿ. ಇನ್ನರ್ಧಗಂಟೇಲಿ ಬಂದ್ಬಿಡ್ತೇನೆ. Good luck & God bless you, both ! (ರಾಮೂನ ಬಾದ ಹಾದಿಯಕಡೆಯೇ ತಳ್ಳಿ ತಾನು ಎದುರು ಮಾರ್ಗದಲ್ಲಿ ನಿಷ್ಕ್ರಮಿಸುವನು.)

## ದೃಶ್ಯ ೩

[ಪಾರ್ವತಿ ಮೀನಾ-ಕನ್ಯೆಯ ಸ್ವಾಗತಕ್ಕೆ ಸಿದ್ಧಗೊಳಿಸುತ್ತಿರುವಾಗ ಒಳಬಾಗಿಲಿನಿಂದ ನಾರಣಪ್ಪ ಆತುರದಿಂದ ಪ್ರವೇಶಿಸಿ]

ನಾರ :— ಲೇ ಲೇ ಲೇ, ಎಲ್ಲೇ ಇವ್ನು,— ಎಲ್ಲೇ ಇವ್ನೂ ? .

ಪಾರ್ವತಿ :— ಯಾರೂಂದ್ರೆ ? ಯಾಕಿಷ್ಟು ಗಾಬರಿ ?

ನಾರ :— ನಿಮ್ಮಗ, ನಿಮ್ಮಗ್ನೇ, ನಿನ್ನುಪುತ್ರ, ರಾಮು, ಶ್ರೀರಾಮಚಂದ್ರ. ಎಲ್ಲೋ ಅಡವೀಗ್ಹೊರಟ್ಹೋಗಿದಾನೆ ಅಂತ್ಕಾಣತ್ತಲ್ಲೇ ! ಮನ್ಲೇ ಇಲ್ಲ !

ಪಾರ್ವತಿ :— ಅಯ್ಯೋ, ಮನೇಲಿಲ್ವೇ ? ಹಾಗಂದ್ರೇನಂದ್ರೆ ಅರ್ಥ ?

**ನಾರ** :— ಅರ್ಥ, ಅವ್ನೂ....ಮನೇಲೀ........ ಇಲ್ಲಾಂತ....ಅರ್ಥ. ತಾತ್ಪರ್ಯ, ತಂದೆ ತಾಯಿ ಮಾತಿಗೆ ಬೆಲೆ ಕೊಡ್ದೆ ಓಡ್ಹೋದ ಅಂತ.

**ಪಾರ್ವತಿ** :— ಎಲ್ಲಾದ್ರೂ ಉಂಟೇನಂದ್ರೆ. ನಾನಷ್ಟೇಳಿದ್ದೇನೆ. ರಾಮೂ !

**ನಾರ** :— ಯಾಕೆ, ಯಾಕ್ಸುಮ್ನೇ ಕೂಗ್ಕೋತೀಯೇ ? ಅವ್ನಿಲ್ಲ. ಅದ್ಯಾಕಾದ್ರೂ ಈಗಿನ್ಕಾಲದ ಹುಡುಗ್ರು ಮದ್ವೆ ಅಂದ್ರೆ ಹೀಗ್ಹೆದರ್ಕೊಂಡೋಡ್ಹೋಗ್ತಾರೋ ನಾನ್ಕಾಣೆ. .... ಲೇ, ನಮಗ್ಯಾವಾಗ್ಲೇ ಮದ್ವೆ ಆದ್ದು ?

**ಪಾರ್ವತಿ** :— ಸರಿ. ನಿಮ್ಗಾಯ್ತು, ಅನ್ಮೃಹೂರ್ತ ಮದ್ವೆ ಎರ್ಡೂ ಒಟ್ಗೇ. ಈಗ್ಲೂ ಹಾಗೇ ಆಗೂಂದ್ರಾಗುತ್ತೇನೂ ?

**ನಾರ** :— ಛೆ ಛೆ, ಯಾಕಾಗ್ಬೇಕು ? ಪ್ರಸ್ಥಿಪೂರ್ತೀನೂ ಮದ್ವೇನೂ ಒಟ್ಗೇ ಮಾಡ್ಕೊಂಡ್ಬಿಡ್ಲಿ, ಖರ್ಚಾದ್ರೂ ಉಳಿಯುತ್ತೆ. ನೋಡೇ, ಮುಖ್ಯವಾಗೀ, ನಿನಗೆ ಬುದ್ಧಿಇಲ್ಲ. " ಅಮರ ಓದ್ಲೀ ಅವ್ನು " ಅಂತ್ನಾನಂದೆ. " ಅಮಲ್ದಾರ್ರಾಗ್ಲಿ ಅವ್ನು " ಅಂತ್ನೀನಂದಿ. ಇಗೋ ಅದಕ್ಕಿದೇ ಫಲ. ಚೊಟ್ಟಿಗಾರರ್ಹಾಗೆ crop ಬಿಟ್ಕೊಂಡು, ಸದಾ ಕನಡಿ ಮುಂದೆ ಕೂತ್ಕೊಂಡು ಹೆಂಗಸಿನ್ಹಾಗೆ ಬೈತಲೆ ತಿದ್ಕೋತಾ,–ಹೇಳಿದ್ಮಾತು ಕೇಳೋಣಿಲ್ಲ, ಮಾಡೋಣಿಲ್ಲ—ಏನೋ ತಾನೇ ಘೋಡ್ ಬೃಹಸ್ಪತಿಹಾಗೆ, ಪ್ರತಿಒಂದಕ್ಕೂ ಪ್ರಶ್ನೆ ಹಾಕೋದು, ಇಂಗ್ಲೀಷ್ನಲ್ಲಿ !

**ಪಾರ್ವತಿ** :— ನೀವು ಇಂಗ್ಲೀಷ್ನೋಲ್ಲಿ ಧಾನ್ಯಾಗ್ರೇಗಾದೋರಂತೆ, ಈಗ ಅವರ್ಬಂದ್ಬಿಡ್ತಾರಲ್ಲ, ಏನ್ಮಾಡೋದೂಂದ್ರೇ ?

**ನಾರ** :— ಮಾಡೋದೇನ್ಹೇಳ್ಕೋ, ಇಂಗ್ಲಿಷ್‌ಮಗ, ಕನ್ನಡ್ಹೋರ್ಮಾತು ಕಿವೀಗ್ಹಾಕ್ಕೊಳ್ದೆ ಓಡ್ಹೋದಾನಂತ.

(ಜೋಯಿಸ ಹೊರಬಾಗಿಲಲ್ಲಿ "ನಾರ್ಣಪ್ನೋರೇ" ಎಂದು ಕೂಗಲು)

**ಪಾರ್ವತಿ** :— ಅಗೋ ಜೋಯಿಸ್ರೂ ಬಂದೇಬಿಟ್ರು.

**ಜೋಯಿಸ** :— (ಪ್ರವೇಶಿಸಿ) ಏನ್ ನಾರ್ಣಪ್ನೋರೇ, ಎಲ್ಲಾ ಸಿದ್ಧತಾನೇ ? ಇನ್ನೇನೀಗ ಬಂದ್ಬಿಡ್ತಾರವ್ರು. ರಾಮು ಎಲ್ಲಿ ?

ನಾರ :— .......ಹೇಳೇ ನಿನ್ನ ಮಗನ ಪ್ರತಾಪಾನ. ಯಾಕೆ ಕಾಷ್ಟಂಗ್ಲೆ ಕಾಡ್ಪಾಪನ್ಹಾಗೆ ಕಣ್ಕಣ್ಬಿಡ್ತಾ ನಿಂತಿದೀಯೆ? (ಜೋಯಿಸರಿಗೆ) ಆಯಾಗ್ಹೋಯ್ತು, ನಾ ಹೇಳ್ಲಿಲ್ವೇನಪ್ಪಾ, ಇವ್ನೊಪ್ಪೋದಿಲ್ಲ ಅಂತ—ಸುಮ್ನೆ ನಾವ್ನಾವ್ ವದ್ಯಾಡೋದಷ್ಟೆ.

ಜೋಯಿಸ :— ಯಾಕ್ಯೆಲ್ಹೊರಟ್ಹೋದ? ಹೇಳಿದ್ರೋ ಇಲ್ವೋ ಹೀಗೇಂತ?

ನಾರ :— ಹೇಳಿದ್ದೂ ಆಯ್ತು, ಕೇಳಿದ್ದೂ ಆಯ್ತು, ಅವನ್ಹೇಳ್ದ್ಕೇಳ್ದೆ ಓಡ್ಹೋಗಿದ್ದೂ ಆಯ್ತು. ಈ ಎ. ಬಿ. ಸಿ. ಡಿ. ಕಲಿತ್ಕೊಂಡೋರ ಹಣೇಬರಹ ಎಲ್ಲಾ ಅಷ್ಟೇ. (ರಾಮು ಪ್ರವೇಶಿಸಲು) ಅಯ್ಯೋ!

ಜೋಯಿಸ :— ಇಗೋ ಬಂದ್ಬಿಟ್ನಲ್ಲ!

ಪಾರ್ವತಿ :— ಹಾ, ನೋಡಿದ್ರಾ, ಬರದೆ ಏನ್ಮಾಡ್ತಾನೆ? ಇವರ್ನ್ಸನ್ಕೆ ಮೂರ್ಹೊತ್ತೂ ಇಂಗ್ಲೀಷು ಇಂಗ್ಲೀಷೂಂತ ಆದರ್ಕ್ರೇಲ್ಬಿದ್ದು—ನೀಹೋಗಪ್ಪಾ, ರಾಮೂ, ಜಾಣ, ಕೋಟುಗೀಟು ಹಾಗೇ ಹಾಕ್ಕೊಂಡಿರು, ಕರೆದಾಗ ಬಂದ್ನಾತ್ಕೊಂವ್ಯಂತೆ. (ರಾಮು ನಿಷ್ಕ್ರಮಿಸುವನು) ಇಂಗ್ಲೀಷ್ ಓದಿದ್ದಕ್ಕೆ ಹೊತ್ತಿಗೆ ಸರಿಯಾಗ್ಬಂದ. (ಹೊರಗೆ ಜಟ್ಕಾ ಬಂದುನಿಂತ ಸದ್ದಾಗಲು) ಅಗೋ ಜಟ್ಕಾ ಸದ್ದು! ಬಂದ್ರೇನೋ!

ನಾರ :— (ಬೀದಿ ಬಾಗಿಲಕಡೆಗೆ ನಡೆಯುತ್ತಾ) ಬನ್ನಿ ಜೋಯಿಸ್ರೇ ಬನ್ನಿ, ಬನ್ನಿ.

[ಜೋಯಿಸ ನಾರಣಪ್ಪ ಮರೆಯಾಗುವರು. ಪಾರ್ವತಿ ಚಾಪೆ ಇತ್ಯಾದಿ ಸರಿಪಡಿಸು ವಳು....ನಾರಣಪ್ಪ ತಲೆ ಚಚ್ಚಿಕೊಳ್ಳುತ್ತಾ ಹಿಂತಿರುಗಿ]

ಮುಗೀತ್, ಮುಗೀತ್, ಮುಗೀತ್, ನೆಗೆದ್ಬಿದ್ಹೋಯ್ತು, ನಾಶವಾಗ್ಹೋಯ್ತು, ಬಿಡಿ. ಹೋಯ್ತು.

ಪಾರ್ವತಿ :— ಅಯ್ಯೋ, ಏನಾಯ್ತುಂದ್ರೆ?

ನಾರ :— (ಕುರ್ಚಿ ಹತ್ತಿರ ಕುಕ್ಕರಗಾಲಲ್ಲಿ ಕುಳಿತು ತಲೆಮೇಲೆ ಕೈಯಿಟ್ಟು) ಏನಾಯ್ತೋ? ಅಲ್ನೋಡು (ಬೀದಿ ಬಾಗಿಲಕಡೆ ತೋರುವನು)

ಸುಬ್ಬಕ್ಕ :— (ಕೋರಿ, ಗಂಟು, ತಂಬಿಗೆ, ಹಿಡಿದು ಕೋಲೂರಿ ಪ್ರವೇಶಿಸಿ) ಏನೇ ಪಾತೂ, ಚೆಂದಾಗಿದೀಯಾ ?

ಪಾತು :— (ನಮಸ್ಕರಿಸಿ ಹೇಳುತ್ತಾ) ಹೂನಮ್ಮಾ, ಈಗ ಬಂದ್ಯೇನು ?

ಸುಬ್ಬಕ್ಕ :— ಹೂ....(ಅಳಿಯನಿಗೆ) ಚೆನ್ನಾಗಿದೀರಾ ನೀವ್ರೂ ?

ನಾರ :— ಹೂ, ಚೆನ್ನಾಗಿದೇನೆ. ಎಲ್ಲಾ ತೀರ್ಥಯಾತ್ರೇನೂ ಇಷ್ಟು ಬೇಗ ಮುಗಿಸ್ಬಿಟ್ರಾ ?

ಸುಬ್ಬಕ್ಕ :— ಎಲ್ಲಾ ಮುಗೀತಪ್ಪಾ. ಇನ್ನುಳ್ದಿರೋದ್ಕಂಗೊಂದೇ ಯಾತ್ರೆ.

ಪಾರ್ವತಿ :— ಸ್ವಸ್ಥವಾಗಿದ್ದೀರಾ ಅಮ್ಮ ನೀವು ?

ಸುಬ್ಬಕ್ಕ :— ನಂಗೇನ್ ಸ್ವಸ್ಥವಾಗಿದ್ರೆ ಮೊಡ್ರೋಗ? ನಮ್ಮಂಥಾವ್ರಿಗೆಲ್ಲಾ ಪ್ರೂಣ್ಣಾಯಿಸ್ಕೊಟ್ಟಿರ್ತಾನೆ ಬ್ರಹ್ಮ. ಮಗು ಎಲ್ಲಿ ?

ನಾರ :— ಒಳಗೆ ಕೋಟು ಟೋಪಿ ಹಾಕ್ಕೊಂಡ್ಕೂತಿದೆ. (ಪಾರ್ವತಿಗೆ) ಲೇ, ಒಳಗೆ ಕರ್ಕೊಂಡ್ಹೋಗಿ, ಸ್ನಾನಕ್ಕೇರ್ಪಾಟ್ಮಾಡಿ, ಹುರಿಟ್ಕೋ, ವೊಸರವ ಲಕ್ಷೀನೋ—

ಪಾರ್ವತಿ :— ಸಾಕ್ಸುಮ್ನಿರಿ, ನೀವ್ಮಾತಾಡ್ಬೇಡಿ ನಂಗೆಲ್ಲಾ ಗೊತ್ತಿದೆ. ಬಾಮ್ಮಾ.

ಸುಬ್ಬಕ್ಕ :— ನಂಗದೆಲ್ಲಾ ಒಂದೂ ವ್ಯೆಗಾಗೋಲ್ಲಮ್ಮ, ಬೇಡ. ಒಂದ್ಲೋಟ ಬಿಸಿಬಿಸಿಯಾಗಿ ಹಾಲಿದ್ರೆ ಸಾಕು. ಒಂದ್ನಾಕು ಕಿತ್ಲೇಹಣ್ಣಿದೆ, ತಂದಿದ್ದೇನೆ (ತಾನು ತಂದ ಕೋರಿ, ಕೋಲು ಅಲ್ಲೇ ಗೋಡೆಗಾನಿಸಿ ಪಾರ್ವತಿ ಜೊತೆಯಲ್ಲಿ ಒಳಗೆ ಹೋಗಲು)

ನಾರ :— ಅಯ್ಯಯ್ಯೋ (ಕುರ್ಚಿ ಬಿಟ್ಟು ಕೆಳಗಿಳಿದು ಬರುತ್ತಾ) ಈ ಕೋಲು ಕೋರಿ ಜವಾಹಿರಿ ಇಲ್ಲೇ ಬಿಟ್ಹೋದ್ರಲ್ಲಾ ! (ಕೋಲಿಗೆ ಕೋರಿ ಗಂಟು ಸಿಕ್ಕಿಸಿಕೊಂಡು ಒಳಗೆ ಹೋಗಿ ಅವನ್ನು ಅಲ್ಲಿ ಬಿಟ್ಟು ಹಿಂತಿರುಗಿ ಪೆಟ್ಟಿಯಿಂದ ನಶ್ಯದ ಚಿಟಿಕೆ ತೆಗೆಯುತ್ತಾ) ಏನ್ ಜೋಯಿಸ್ರೇ, ಇನ್ನೇನ್ಮದ್ವೆ ಆದ್ಹಾಗೇತಾನೇ ? (ನಶ್ಯವೇರಿಸಿ ಅಸ್ಪಷ್ಟದಿಂದ)

ಸಾಕೋ ಇನ್ನೂ ಏನಾದ್ರೂ ಬೇಕೋ, ಅಪಶಕುನ ? **ಹಾಕ್—ಹಾಕ್—ಆಕ್‌ಛೀ !** (ಸೀನುವನು)

**ಪಾರ್ವತಿ** :— (ಪ್ರವೇಶಿಸಿ) ಸಾಕು ಸಾಕು **ಸಾಕು**. **ಸೂರ್ಪ್ಣರ್ಖ್ಣೀಗೋ** ಹಾಗೆ **ಒಂಟ್ಸೀನು** ಸೀನ್ಬಿಟ್ಟು, ನಮ್ಮ ತಾಯಿ ಬಂದಿದ್ದನ್ನ ಅಪಶಕುನ ಅಂತಾರೆ !

ನಾರ :— (ಕೆಂಪು ವಸ್ತ್ರದಲ್ಲಿ ಮೂಗು ಶುದ್ಧಮಾಡಿಕೊಂಡು) **ಅಲ್ವೇ**, ನಶ್ಯ ಹಾಕ್ಕೊಂಡದ್ರಿಂದ ಬಂದ ಸೀನು ಅಪಶಕುನವೇನೇ ?

ಜೋಯಿಸ :— ಎಂದಿಗೂ ಇಲ್ಲ. ಹಾಗೇ ಆಕೆ ಬಂದಿದ್ದೂನೂ ಅಪಶಕುನ ಅಲ್ಲ. ಹೊಂಗ್ನೋರ್ಯ್ಯಾರಾದ್ರೂ ಆದ್ರೆ ಅಪಶಕುನ ಅಮಂಗಳವೇ ಹೊರ್ತೂ, ಮನೆಯೋರು, ಇವ್ರೆಲ್ಲಾ, ಶಾಸ್ತ್ರದಪ್ರಕಾರ, ಗಂಗಾ ಭಾಗೀರಥಿ ಸಮಾನ !

ಪಾರ್ವತಿ :— ನೋಡಿದ್ರಾ. ಅಷ್ಟೆಲ್ಲಾ ಎಲ್ಲಿ ತಿಳಿಯುತ್ತೆ ? (ಹೊರಗೆ ಜಟ್ಕಾ ಸದ್ದು) ಆಗೋ ಜಟ್ಕ, ಈಗ ಬಂದ್ರೇನೋ ! (ಜೋಯಿಸರು ನಾರಣಪ್ಪ ಹೊರಗೆ ಹೋಗುವರು. ಪಾರ್ವತಿ ಯಥಾಪ್ರಕಾರ ಸಡಗರ ತೋರುವಳು. ತೆರೆಯಲ್ಲಿ "ದಯಮಾಡಿಸಬೇಕು, ದಯಮಾಡಿಸಬೇಕು, ನಮಸ್ಕಾರ, ಇತ್ಯಾದಿ, ಎಲ್ಲರೂ ಪ್ರವೇಶಿಸುವರು) ಬನ್ನಿಯಮ್ಮ, ಬನ್ನಿ, ಬನ್ನಿ.

ಜೋಯಿಸ :— ಬನ್ನಿ, ಬನ್ನಿ, ದಯಮಾಡಿ.

ನಾರ :— ದಯಮಾಡಿ, ಕೂಡಿ.

ಶಿ. ರಾ :— ಅಬ್ಬಾಬ್ಬಾಬ್ಬ, ಏನ್ ಬಿಸ್ಲು ! ಅಲ್ಲಿಂದಿಲ್ಲೀಗೆ ಗಾಡೀಲಿ ಬರೋದ್ರಲ್ಲೇ ಸಾಕಾಗ್ಹೋಯ್ತು ನೀವ್ಬಂದೆಷ್ಟೊತ್ತಾಯ್ತು, ಜೋಯಿಸ್ರೇ?

ಜೋಯಿಸ :— ನಾನೂ, ಈಗೊಂದೆರಡ್ಮೂರು ನಿಮಿಷಗಳಾಗಿರಭೋದಷ್ಟೆ. ಕೂಡಿ, ಕೂಡಿ.

**ಪಾರ್ವತಿ** :— ಹೀಗ್ಬನ್ನೀವ್ಮ್ಮಾ, ಬಾವ್ಮಾ, **ಕೂತ್ಕೋ**.

ಜೋಯಿಸ :— ಆ, ರಾಮು, **ರಾಮೂ, ರಾಮಣ್ಣೀ, ಬಾಪ್ಪಾ !** (ರಾಮು ಪ್ರವೇಶಿಸುವನು) **ಬಾ ಕೂತ್ಕೋಬಾ.**

ವಿ. ರಾ:— ಬನ್ನಿ, ಬನ್ನಿ, ಬೀಗ್ರನ್ನಿ.

ನಾರ:— ಕೂತ್ಕೊಳ್ಳೀ.

(ಹಿಂಬಾಗಿಲಲ್ಲಿ ಸುಬ್ಬಕ್ಕ ಮುಕ್ಕಳಿಸಿದ ಬಾಯನ್ನು ಸೆರಗಿನಿಂದ ಒರೆಸಿಕೊಳ್ಳುತ್ತಾ)

**ಸುಬ್ಬಕ್ಕ**:— ಮೊನ್ನೆ ಅನಂತ್ಶಯನಕ್ಹೋಗಿದ್ನಲ್ಲಾ, ಲಕ್ಷದ್ವೀಪಾ, ಭೋಜೆನ್ನೋ ಭೋಜೆನ್ನು! ಗುಡಿ ಗುಡೀನೇ ಹತ್ಕೊಂಡು ಧಗ್ ಧಗ್ ಧಗ್ ಧಗಾಂತ ಉರೀತಾ ಇದ್ದಾಗಿತ್ತು ಬಿಟ್ಬಿಟ್ಬರ್ಬೇಕಾದ್ರೆ ಗೋಳೋ ಅಂತ (ಇತರರಿರುವುದನ್ನು ಗಮನಿಸಿ) ಅಯ್ಯಯ್ಯೋ, ನಾನ್ನೋಡ್ಲೇ ಇಲ್ಲ, ಯಾರ್ಯಾರೋ ಬಂದ್ಬಿಟ್ಟಿದಾರಲ್ಲೇ!

**ಪಾರ್ವತಿ**:— ಬಾಮ್ಮ. ನಮ್ಮ ರಾಮೂಗೆ, ಹೆಣ್ಣೋಡೋಕೇ ಅಂತ ಬಂದಿದಾರೆ.

**ಸುಬ್ಬಕ್ಕ**:— ಏನೂ? ಹೆಣ್ಣೋಡೋಕೇ? ನಮ್ಮಗೂಗೇ? ಓಹೋಹೋ ನಾನ್ಹೊತ್ತಿಗೆ ಸರಿಯಾಗೇ ಬಂದೆ ಹಾಗಾದ್ರೆ. (ಮುಂದೆ ಬಂದು ಕಮಲಮ್ಮನನ್ನು ಮಗಳೆಂದು ತಿಳಿದು ಅಷ್ಟತ್ತಿಪ್ಪತ್ತ್ರೆ ದುಬಾರಿ ಕಣ್ಣರಳಿಸ್ಕ ಬಿಡದು ಕಕ್ಕಿಸಿ) ಇದೇನೇ ಇದು, ಹುಡಿಗೀ, ಕಾಲ ಎಷ್ಟ್ ಕೆಟ್ಹೋಗಿದ್ರೂ ಅತೀ ವಯಸ್ಸಾಗ್ಹೋಗಿದ್ದಾಗಿದ್ಯಲ್ಲೇ! ತೀರಾ ತಲೆ ನೆರೆಯೋತನಕಾನೂ ತಾಳಿಕಟ್ದೆ ಇಟ್ಕೊಂಡ್ಬಿಡೋದೇ?

**ಪಾರ್ವತಿ**:— ಛಿ ಛಿ ಛಿ. ಅಲ್ಲಮ್ಮ. ಇವ್ರು ಹುಡಿಗಿ ತಾಯಿ. ಇಗೋ ಇಲ್ಲಿದಾಳ್ನೋಡು ಹುಡಿಗಿ.

**ಸುಬ್ಬಕ್ಕ**:— ಓಹೋ, ನೀವು ಹುಡ್ಗಿ ತಾಯೀನಾ? ನಿಮ್ಮಲಂಕಾರ ನೋಡಿ ಏನೋ ತಿಳ್ಕೊಂಡ್ಬಿಟ್ಟೆ. ಒಪ್ಪತ್ತೆ. ಒಪ್ಪತ್ತೆ. ಒಪ್ಪತ್ತೆ. (ಮೀನಾಳ ಸಮೀಪಿಸಿ) ನೀನೇನೂ ಹುಡಿಗೀ? ಹುಂಂಂ. (ತಲೆಯಿಂದ ಕಾಲುವರೆಗೂ ನೋಡಿ, ಸೆರಗು ಹಿಡಿದು ಬಿಟ್ಟು ನೋಡಿ) ಇದೇನ್ ಸೀರೇನೋ ಜಮುಖಾನಾನೋ ನೀನ್ ಸುತ್ಕೊಂಡಿರೋದು? ಏನ್ ಬಣ್ಣವೇ! ಚಿಟ್ಟೆಹುಳು ಇದ್ದಾಗಿದ್ದೀಯಲ್ಲೇ! (ನೆಲದಮೇಲೆ ಮುಂದೆ ಮೀನಾಗೆ ಕೂಡಲು ಸ್ಥಳ ತೋರುತ್ತಾ) ಬಾ, ಕೂತ್ಕೋಬಾ. (ನೆಲ ತಟ್ಟಿ) ಇಲ್ಕೂತ್ಕೋ ಬಾ.

(ಮೀನಾ ಬಿಟ್ಟಿ ಕೋಳಿಯಾಗುವುದಲ್ಲಾ ಎಂದು ತಾಯಿಯನ್ನು ನೋಡುವಳು. ತಾಯಿ "ಹೋಗಲಿ, ಕೂಡು" ಎನ್ನುವಂತೆ ಸಂಜ್ಞೆಮಾಡುವಳು.)

ಪಾರ್ವತಿ :— ಅಮ್ಮಾ, ಹೀಗೇ ಇತ್ಲಾಕಡೆ ಬಾ, ಚಾಪೆಮೇಲ್ಕೂತ್ಕೊಳ್ಳೋರಂತೆ.

ಸುಬ್ಬಕ್ಕ :— ಯಾಕೇ ? ಸೊಸೆ ಸೀರೆ ಕೊಳೆ ಆಗ್ಹೋಗುತ್ತೆ ಅಂತ್ಲೋ ಉಪಚಾರ ? ಕಲಿಗಾಲ, ಕಲಿಗಾಲ. ಯೋಚ್ನೇ ಮಾಡ್ಬೇಡ್ವೇ, ಆ ರಾವು ಬಡಿಯೋ ಬಣ್ಣಕ್ಕೆ ಇನ್ನೂ ನಮ್ಮೆಲ ಕೆಟ್ಟೀತೇ ಹೊರ್ತು, ಆ ಸೀರೇಗೇನೂ ಆಗೋಲ್ಲ. (ಮೀನಾಗೆ) ಬಾರೇ, ಪಂಚರಂಗಿ, ಕೂತ್ಕೋ ಬಾ.

ಜೋಯಿಸ :—ಅಜ್ಜಮ್ನೋರೇ, ಗಂಡಸ್ರು, ಇಲ್ಲಿ ಮಾತಾಡ್ತಾರೆ.

ಸುಬ್ಬಕ್ಕ :— ಮಾತಾಡ್ಲಿ, ಮಾತಾಡ್ಲಿ, ನಾನೇನ್ ಬೇಡ ಅನ್ನೋಲ್ಲ, ದುಡ್ಡು ಕಾಸು ಮಾತು ನೀವ್ನೀವ್ಮಾತಾಡ್ಕೊಳ್ಳಿ. ಮನೇಗ್ಬರೋ ಸೊಸೆ ಹ್ಯಾಗಿರ್ಬೇಕೂ ಅಂಬೋದ್ ನಮಗ್ಗೊತ್ತು. ನಾವ್ ವಿಚಾರಿಸ್ಕೋತೇವೆ. (ಮೀನಾಗೆ) ಏನೇ, ನಿನ್ನ ಏನೂಂತ್ಕೂಗ್ತಾರೆ ?

ಮೀನ :— ಆ ?

ಸುಬ್ಬಕ್ಕ :— ಏನ್ ಆ ? ಕಿವಿ ಕೇಳೊಲ್ವೇನೇ ನಿಂಗೆ? ನಿನ್ಹೆಸ್ರೇನೂಂತ್ಕೇಳ್ದೆ. (ಮೀನಾ ತಾಯಿಯನ್ನು ನೋಡುವಳು)

ಕಮಲು :— ಅವಳ ಹೆಸರೂ—

ಸುಬ್ಬಕ್ಕ :— ಕ್ಷಮ್ಸೀ, ನಾನ್ನಿಮ್ಮನ್ನಲ್ಲ ಕೇಳಿದ್ದು. ಇವ್ಳಧ್ವನಿ ಹೇಗಿದ್ಯೋ ತಿಳ್ಕೊಳ್ಳೋಣ ಅಂತ.

ಕಮಲು :— ಅದ್ಸರಿ. ಅವಳ್ಗೇ ಹೇಳೋಕೆ....

ಸುಬ್ಬಕ್ಕ :— **ಯಾಕೇ ? ಮೂಕೀನೇ ?** ಏನೋ, ರಾಮೂ, ನಿನ್ನ ಪುಣ್ಯವೇ ಪುಣ್ಯ ?

ಜೋಯಿಸ :— ಛೆ ಛೆ ಛೆ, ಹಾಗಲ್ಲ ಅಜ್ಜಮ್ನೋರೇ ; ಹುಡ್ಗೀಗೆ ನಾಚಿಕೆ ಅಂತ....

ಸುಬ್ಬಕ್ಕ :— ನಾಚ್ಕೇ? ಓಹೋಹೋ, ನಾಚ್ಕೆ ಅನ್ನೋದಿನ್ನೂ ಇದ್ಯೇನು ಭೂಮಿಮೇಲೆ ? ಪುಣ್ಯ ಪುಣ್ಯ. (ಮೀನಾಗೆ) ಫರವಾಗಿಲ್ಲ, ನಾನಿದೇನೆ, ಹೇಳು.

ಮೀನ :— ಮೀನ.

ಸುಬ್ಬಕ್ಕ :— ಏನಂ ? ಸ್ವಲ್ಪ ಗಟ್ಟಿಯಾಗ್ಹೇಳು. ಮಧ್ಯಾಹ್ನ ಊಟ ಮಾಡ್ಲಿಲ್ವೇನೂ ?

ಮೀನ :— ಮೀನ.

ಸುಬ್ಬಕ್ಕ :— ಮೀನಾ ? ಅದೇಸ್ಮೀನೇ ? ನೀರಲ್ಲಿರತ್ತಲ್ಲಾ ?

ಜೋಯಿಸ :— ಉ ಹು ಹು ಹು ಹು ಹು, ಮೀನಾಕ್ಷಿ ಅಜ್ಜಮ್ನೋರೇ ಮೀನಾಕ್ಷಿ !

ಸುಬ್ಬಕ್ಕ :— ಓಹೋ, ಮುದ್ದಿಗೋಸ್ಕ, 'ಮೀನೂ' ಅಂತ್ಕರೀತಾ ರೇನೋ ? ಸರಿ. ಇದೇನ್ನೀನ್ಹಾಕ್ಕೊಂಡಿರೋದ್ ಬಂಗಾರದ್ದೇನೋ ಬಳೆ?

ಮೀನ :— ಬಂಗಾರದ್ದಲ್ದೆ ಹಿತ್ತಾಳೇದ್ಹಾಕ್ಕೋತಾರ್ಯೇ ?

ಸುಬ್ಬಕ್ಕ :— **ಏನೂ? ಎದುರ್ತ್ತ್ರ ಹೇಳ್ತೀಯೋನೇ ? ಲಾಕ್ಷಣ ವಾಯ್ತು.**

ಕಮಲು :— ಮೀನಾ, ಸ್ವಲ್ಪ ಸುಮ್ನಿರಮ್ಮ. (ಸುಬ್ಬಕ್ಕನಿಗೆ) ದಯವಿಟ್ಟು ಕೋಪಿಸ್ಕೋಬೇಡಿ, ಅವ್ಳಿನ್ನೂ ಹುಡಿಗಿ....

ಸುಬ್ಬಕ್ಕ :— ಹುಡುಗೀ ! ಏನ್ಹುಡುಗೀ? ಇಷ್ಟ ವಯಸ್ನಲ್ಲಿ ನಂಗಿಗೋ (ಪಾತೂನ ತೋರಿ) ಇವ್ರು ಕೈ ಕೂಸು. ಇವ್ರಣ್ಣ ಕೈ ಹಿತ್ಹಾಕಿಸ್ಕೋತಾ ಇದ್ದ ! ಹುಡ್ಗೀ ಅಂತೆ ಹುಡ್ಗೀ ! ಅಲ್ಲಾ, ಗಂಡನ್ಮನೇಗ್ಹೋಗಿ ಸಂಸಾರಮಾಡೋಳು ಹೀಗಾದ್ರೆ, ಬಹಳ ಚೆನ್ನಾಗ್ಬಾಳ್ತಾಳೆ ಅತ್ತೆಮಾವನ ಕೈಲಿ. ನಮ್ಮ ಕಾಲದಲ್ಲಿ ಇಂಥಾದ್ದೊಂದ್ಮಾತಾಡಿದ್ದಿದ್ರೆ ನಾಲಿಗೆ ನಾಲಿಗೆಸೀಳಿ ಉಪ್ಪಿನ್ಕಾಯಿ ಹಾಕ್ಬಿಡ್ತಾ ಇದ್ರು ಝಾಡೀಲಿ, ಉಪ್ಪಿನ್ಕಾಯಿ ! (ಜೋಯಿಸರಿಗೆ) 'ನಾಚ್ಗೇ' ಅಂದ್ರಲ್ಲಾ ಇವಳ್ಗೇ ?

ರಾಮು :— ಅಜ್ಜೀ, ನೀನ್ ಸ್ವಲ್ಪ ಸುಮ್ನಿರ್ಬಾರ್ದೇ.

ಸುಬ್ಬಕ್ಕ :— (ನಾಯಿಯಂತೆ ಸಿಳ್ಳಿಂದು) ಸೀ ಸುಮ್ನೇ ಕೂತ್ಕೊಳ್ಳೋ ನೀನೂ (ಎಂದು ಕಿರಲಿ) ವಹಿಸ್ಕೊಂಡ್ಬಂದ್ಬಿಟ್ಟ ಆಗ್ಲೇ ಹೆಂಡ್ತಿ ಕಡೆ. ಮದ್ವೇಗ್ಮುಂಚೇನೇ ಹೀಗಾದ್ರೆ, ಮನೇಗ್ಬಂದ್ಮೇಲೆ ನಾವ್ಯಾರೂ ಉಳಿಯೋಹಾಗೇ ಇಲ್ಲ ಅಷ್ಟೆ.

ಓಹೋಽಹೊಹೋ. ಆದೆ. ಸುಮ್ನೆ ಗಂಭೀರ್ವಾಗಿ ಕೈಕಟ್ಕೊಂಡ್ಕೊತ್ಕೊಂಡು ದೊಡ್ಡವರ ಮಾತಿಗೆ ಬಾಯ್ಹಾಕ್ದೆ ಸುಮ್ನಿರು.... ಹೂ.... (ಕಮಲನಿಗೆ) ಹೋಽಗ್ಲಿ, ಅಡಿಗೆ ಕೆಲಸ ಏನಾದ್ರೂ ಹೇಳ್ಕೊಟ್ಟಿದೀರಾ ?

**ಕಮಲು :**— ಹೂ.

**ಸುಬ್ಬಕ್ಕ :**— ಆಶ್ಚರ್ಯ! ನೆಲದ್ಮೇಲ್ಕೂತ್ಕೊಳ್ಳೋಽಕೇ ನರಳೆಣಿಸ್ಕೋಽಳು, ಒಲೆಮುಂದೆ ಕೂಡ್ತಾಳೆ ಅನ್ನೋಽದು, ಆಶ್ಚರ್ಯ !! ಎಲ್ಲಿ ... (ಮೀನಾಗೆ).... ಮೆಂತ್ಯದಗೊಜ್ಜು ಮಾಡ್ತೋಽಳು ನೋಽಡೋಽಣ, ಮೆಂತ್ಯದ ಗೊಜ್ಜು ?

**ಕಮಲು :**— ಇಲ್ಲ, ಇಲ್ಲ, ಅಷ್ಟೆಲ್ಲಾ ಬರೋಽಲ್ಲ. ಒಂದನ್ನ ಸಾರು ಮಾಡ್ತಾಳೆ, ಅಷ್ಟೆ. ಪುರಸೊತ್ತು ಜಾಸ್ತಿ ಇಲ್ದೆ....

**ಸುಬ್ಬಕ್ಕ :**— ಪುರಸೊತ್ತು ಜಾಸ್ತಿ ಇಲ್ದೇ ? ಯಾಕಿಲ್ಲ ? ...ಓಹೊಹೊ ಇಸ್ಕೂಲ್ಗೋಽಗ್ತಾಳೇನೋಽ ?

**ಕಮಲು :**— S. S. L. C. ಗೆ ಕಟ್ಟಿದಾಳೆ.

**ಸುಬ್ಬಕ್ಕ :**— ಯಾತಕ್ಕೆ ಕಟ್ಟಿದಾಳೆ ?

**ಜೋಽಯಿಸ :**— **ಪರೀಕ್ಷೇ, ಪರೀಕ್ಷೇ !**

**ಸುಬ್ಬಕ್ಕ :**— ಸ್ವಲ್ಪ ಮೆಲ್ಲಗ್ಮಾತಾಡಿ. ನಂಗೆ ಕಿವಿಕೇಳಿಸುತ್ತೆ. ನಿಮ್ಹಾಗೇಽಗಿನ್ನಾಲ್ದೋಽಳಲ್ಲ. ಇನ್ನೂ ಗಟ್ಟಿಮುಟ್ಟಿಯಾಗೇ ಇದೇನೆ.

**ಜೋಽಯಿಸ :**— 'ಪರೀಕ್ಷೆ' ಅಂದೆ. ಹನ್ನೆರಡ್ರೂಪಾಯಿ ಪರೀಕ್ಷೆ.

**ಸುಬ್ಬಕ್ಕ :**— ಸರಿ. ಇನ್ನೇನ್ ವಿಲಾಯ್ತಿಗ್ಹೋಽಗೋಽದೊಂದೇ ಬಾಕಿ. ಲಾ, ರಾಮೂ, ನಿಂಗೂ ಆಗಿದ್ಯೇನೋಽ ಈ ಪರೀಕ್ಷೇ ?

**ರಾಮು :**— ಇಲ್ಲ. ಇನ್ನೂ ಇಲ್ಲ.

**ನಾರಾ :**— ಲೇಽಯ್ !

**ಪಾರ್ವತಿ :**— ಎಲ್ಲಾದ್ರೂ ಉಂಟೇನಮ್ಮ ? ಅವ್ನು B.A. ಆನರ್ಸಿಗೆ ಕಟ್ಟಿದಾನಮ್ಮ , B.A. ಆನರ್ಸ್ಗೆ !

ಸುಬ್ಬಕ್ಕ :— ಅಯ್ಯೋ, ಇಷ್ಟೇನೇ ? ಏನ್ ನಾಚಿಗ್ಕೇಡೋ ? ಅವ್ರದೇನೇನೋ ಅಕ್ಷರಗಳಿಗೆ ಕಟ್ಟಿದಾಳೆ, ನೀನಿನ್ನೂ ಬಿ.ಎ, ಏ,ಬೀ, ಅದೇನೂ, ಹಾರನ್ಸೇ ? ಅಷ್ಟರಲ್ಲೇ ಕೂತಿದೀಯಲ್ಲೋ ?

ಪಾರ್ವತಿ :— ನೀ ಸುಮ್ನಿರಮ್ಮ, ಮಾತಾಡ್ಬೇಡ. ಇವ್ರ ಪರೀಕ್ಷೆ ಆದ್ಮೇಲೇ ಅವಂದು. ಅರವತ್ರೂಪಾಯಿನ ಪರೀಕ್ಷೇನಮ್ಮ ಅದು !

ಸುಬ್ಬಕ್ಕ :— ಓಹೊಹೊಹೋ, ಪ್ಯಾಸಾದ್ರೆ, ಮಹಾರಾಜರ ಕೈಲಿ ಗೋನು ಈಸ್ಕೊಳ್ತಾರಲ್ಲ, ಜಗನ್ಮೋಹನ ಬಂಗ್ಲೇಲಿ, ಫೋಟೋ ತೆಗೆಸ್ಕೋತಾರಲ್ಲ, ಆ.... ?

ಜೋಯಿಸ :— ಹು ಹು ಹೂ, ಅದೇ ಪರೀಕ್ಷೇನಮ್ಮ.

ಸುಬ್ಬಕ್ಕ :— ಮತ್ತೆ. (ರಾಮೂಗೆ) ಏನೋ, ಹಾಸ್ಯ ಮಾಡ್ತೀಯಾ ನನ್ನ ? (ಮೀನಾಗ) ಏನೇ, ಹಾಗಾದ್ರೆ ನೀನು ಇಂಗ್ಲಿಷ್ ಸರಸ್ವತಿ ! ಅದಕ್ಕೇ ಮೀನಾ ಅಂತ ಮೊಟಕ್ಮಾಡ್ಕೊಂಡಿದ್ದಿ ಹೆಸರ್ನ ! ವೆಂಕಟಲಕ್ಷ್ಮಿ, ಸುಬ್ಬಲಕ್ಷ್ಮಿ ಅಂತ ಕೂಗಿಸ್ಕೊಳ್ಳೋಕೆ ಅವಮಾನ ! ಕುತ್ತಾಲದ್ನೀರೆ ಉಟ್ಕೊಂಡ್ರೆ ಮೈಗೊಪ್ಪೋಲ್ಲ ಅಂತ ಈ ಚಿತ್ರ ವಿಚಿತ್ರ ಗುಡ್ಡೆ.... (ಲೋಲಕ್ಕು ಮುಟ್ಟುತ್ತಾ) ಇದೇನ್ ನಮ್ಮ ಚಳುತುಂಬಿಗೆ ಬಂದ ಹೊತ್ತೇನೋ ? ಕೂತ್ಕೊಂಡು ಉಯ್ಯಾಲೆ ತೂಗ್ಕೋಬಹುದಲ್ಲೇ ! (ಬೈತಲೆ ನೋಡಿ) ಎಲ್ಲಿ, ಎಲ್ಲಿ, ಎಲ್ಲಿ, ಸೊಟ್ಟ ಬೈತಲೆ ತೆಗ್ಕೊಂಡಿದ್ದೀಯೋನೇ ? ಅಯ್ಯಯ್ಯೋ ! ಅಲ್ನೇ, ನೀನೇನ್ ಬ್ರಾಂಬ್ರೋಳೋ ಅಲ್ಲ....ಅಂ....ಊಂ....

ಮೀನ :— ಅಮ್ಮಾ !

ಪಾರ್ವತಿ :— ತಡಿಯಮ್ಮ, (ತಾಯಿಗೆ) ಅಮ್ಮಾ, ಈಗೆಲ್ಲಾ ಹಾಗೇಽಮ್ಮಾ ಬೈತಲೆ ತೆಗ್ಕೊಳ್ಳೋದು, ನಿಂಗೊತ್ತಿಲ್ಲ.

ಸುಬ್ಬಕ್ಕ :— ನಂಗೊತ್ತಿಲ್ವೇ, ನಂಗೊತ್ತಿಲ್ವೇ, ನಂಗೇನೂ ಗೊತ್ತಿಲ್ವೇ ! ನೀನೂ ತೆಗ್ಕೋಳ್ಳೇ ಹಾಗಾದ್ರೆ ಚೆನ್ನಾಗಿರುತ್ತೆ. ಇಷ್ಟಕ್ಕೂ ನಂಗ್ಯಾಕೆ, ನಾನೇನಾದ್ರೂ ತೆಗ್ಕೋಬೇಕಾಗಿದ್ಯೇನೂ ? ಏನೋ ನಂಗ್ತೋರಿದ್ದಾನ್ಹೇಳ್ದೆ. ಮುಖ್ಯವಾಗಿ ನಾನೀವಾಗಿಲ್ಲೀಗೆ ಬರ್ಲೇಬಾರ್ದಾಗಿತ್ತು.

**ನಾಥ:**— ಹಾ, ಹಾ, ನೀವ್ಹೇಳಿದ್ದ್ನಾ ನೊಪ್ದೆ. ನನ್ಗೂ ಈಗಿನ್ಕಾಲದ್ದ್ದೂ ಇವೆಲ್ಲಾ ಸರ್‍ಹೋಗೋಲ್ಲ.

**ಪಾರ್ವತಿ:**— ನಿಮಗೆ ಸರ್‍ಹೋಗ್ದೆ ಇದ್ರೆ ಬೇಡ. ಮದ್ವೆ ಮಾಡ್ಕೊಳ್ಳೋ ನವ್ರು, ಈಗಿನ್ಕಾಲದೋನು. ಮೀನಾ, ಅವರಂದ್ದೂತ್ನೀನೇನೂ ತಿಳ್ಕೋ ಬೇಡಮ್ಮ.

**ನಾಥ:**— ತಯಾರ್‍ಮ್ಮಾಡೇ, ತಯಾರ್‍ಮ್ಮಾಡು, ತಯಾರ್‍ಮ್ಮಾಡು. ಸೊಸೇಗೆ ಮೇಲ್ಪಂಕ್ತಿ ಅತ್ತೇದು. ಸರಿಯಾಗೇ ಇದೆ.

**ಪಾರ್ವತಿ:**— ಆಗ್ಲಿ.... ಏನಮ್ಮ, ನಿಂಗೆ ಹಾಡು ಹಸೆ ಬರುತ್ಯೇ? ನಮ್ಮ ರಾಮೂಗೆ ಸಂಗೀತ ಅಂದ್ರೆ ಪಂಚಪ್ರಾಣ.

**ಮೀನ:**— ಬರುತ್ತೆ.

**ಪಾರ್ವತಿ:**— ಎಲ್ಲಿ, ಯಾವ್ದಾದ್ರೂ ಹೇಳು, ಕೇಳೋಣ.

**ಮೀನ:**— ನನಗೇ....ಬರೀ ಬಾಯಿಲ್ಹೇಳಿ.... ಅಭ್ಯಾಸ್ವಿಲ್ಲ.

**ಸುಬ್ಬಕ್ಕ:**— ಕೈಯಿ ಬಾಯಿ ಸೇರಿಸ್ಕೊಂಡ್ಹೇಳಿ ಅಭ್ಯಾಸ್ವಿರಬಹುದು.

**ಪಾರ್ವತಿ:**— ಅಮ್ಮಾ!........

**ಸುಬ್ಬಕ್ಕ:**— ನಾನು ನಿನ್ನ ಬಾಯಿಗೆ ಬೀಗ ಹಾಕಿಲ್ವೇ!

**ಕಮಲು:**— ಅವಳೂ, ತಂಬೂರಿ ಶೃತಿ ಮೇಲ್ಹೇಳಿ ಅಭ್ಯಾಸ, ಅದಿಲ್ದೆ ಹೋದ್ರೆ ಕಷ್ಟ ಅಂತ್ಹೇಳಿದ್ದು ಅಷ್ಟೆ.

**ಸುಬ್ಬಕ್ಕ:**— ಓಹೋ! ತಂಬೂರಿ ಅಭ್ಯಾಸವ್ರೋ, ಮಧುರೆ ಮೀನಾಕ್ಷಿ! ತಂಜಾವೂರ್‍ಗೂ ಹೋಗಿ ತಾಘೆ ಕಟ್ಟೋದನ್ನೂ ಕಲ್ತಿದ್ದಾಳು!

**ಮೀನ:**— ಅಮ್ಮಾ, ಹೋಗೋಣಮ್ಮಾ....

**ಪಾರ್ವತಿ:**— ಇದೇನಮ್ಮ ಕೇವಲ ಅನ್ಯಾಯ?

**ಸುಬ್ಬಕ್ಕ:**— ಇಲ್ವೇ ಮಹಾರಾಯಗಿತ್ತೀ, ಇನ್ನು ಬಾಯಿ ಬಿಟ್ರೆ ಕೇಳು. ಏನಾದರೂ ಮಾಡ್ಕೊಳ್ಳಿ ನೀವು.

**ಪಾರ್ವತಿ:—** (ಮೀನಾಗೆ) ಹೇಳಮ್ಮ, ಜಾಣೆ ನೀನು. ಒಂದು ಸಣ್ಣದ್ದೇಳ್ಬಿಡು ಸಾಕು.

**ಮೀನ:—** (ತಾಯಿಯ ಒಪ್ಪಿಗೆ ಕಣ್ಣಿನಲ್ಲಿ ಪಡೆದು)

ರಾಗ–ನಾಟಕುರಂಜಿ. ತಾಳ–ರೂಪಕ.

ಪರಾಕೇಲ ಸರಸ್ವತಿ
ಮುರಾರಿ ಸುತ ಸತಿ ಮತಿ ||
ಪುರಾಣಿ ದರಿಂಚುಟಕು
ಸ್ಮರಿಂಚಗನು ...........
(ಮುಂದೆ ಹಾಡು ಮರೆತು ಜ್ಞಾಪಿಸುಕೊಳ್ಳುವಂತೆ)
ದರಿಂಚುಟಕು ಸ್ಮರಿಂಚಗನು ?....
ದರಿಂಚುಟಕು ಸ್ಮರಿಂಚಗನು?... ....

**ಕಮಲು** – 'ಸರೋಜಮುಖಿ'....
**ರಾಮು** – (ಕಮಲೂಗಿಂತ ಗಟ್ಟಿಯಾಗಿ ಆದರೆ ಒಟ್ಟಿಗೆ) 'ಸರೋಜಮುಖಿ'....

**ಸುಬ್ಬಕ್ಕ:—** ಸ ರೋ ಜ ಮು ಖೀ ?

**ನಾರ:—** ಅಯ್ಯೋ ಅವಿವೇಕೀ! ನಾಚ್ಕೆ ಆಗೋಲ್ಲ ನಿನ್ಗೆ? ಇಷ್ಟು ಜನದೆದುರ್ಗೆ ಅವಳ್ನ ಮಾತಾಡಿಸ್ತೀಯಾ?

**ಸುಬ್ಬಕ್ಕ:—** ನೋಡಿ, ನೋಡಿ, ಹ್ಯಾಗಿದೆ? ನಾಯಕ್ಸಾನಿಯೋಳ್ಹಾಗೆ ಇವ್ಳಿಲ್ಲಿ ತೊಡೆ ತಟ್ಕೊಂಡು ಗಾನ ಪಾಡೋಕೂ, ಅವನು ಕಂಡೂ ಕಾಣ್ದೋಸ್ಹಾಗೆ 'ಹಾ' ಅಂತ ಬಾಯ್ಬಿಟ್ಕೊಂಡು 'ಸರೋಜಮುಖಿ' ಅನ್ನೋಕೂ ಸರ್ಹೋಯ್ತು. "ಸರೋಜಮುಖಿ" ಇಷ್ಟು ಜನಗಳೆದುರ್ಗೆ, ಮದ್ವೇಗ್ಮುಂಚೇನೇ! ಏನ್ ನಾಚಿಗ್ಕೇಡು, ಏನ್ ನಾಚಿಗ್ಕೇಡೂ! ಈ ಕಿವಿ ಇನ್ನೂ ಏನೇನ್ ಕೇಳ್ಬೇಕಾಗಿದ್ಯೋ, ಪಾಪಿ ಕಿವಿ, ಪಾಪಿ ಕಿವೀ!!

**ಮೀನ:—** (ಎದ್ದು ಕರ್ಚೀಫ್‌ನಲ್ಲಿ ಕಣ್ಣೊರಸಿಕೊಳ್ಳುತ್ತಾ) ಹಮ್ಮಾ....

**ಕಮಲು:—** (ತಾನೂ ಎದ್ದು) ಆಗ್ಲಮ್ಮಾ....

**ಪಾರ್ವತಿ** :— ಅಯ್ಯೋ ತಡೀರಿ.

**ಸುಬ್ಬಕ್ಕ** :— ಯಾಕೇ? ಹೋಗ್ಲಿ ಬಿಡೇ.... ಈ ರತಿ ಇಲ್ದೆ ಹೋದ್ರೆ ನಮ್ಮ ರಾಮೂಗೆ ಬೇರೆ ಯಾರೂ ಗತೀನೇ ಇಲ್ಲ ಅಂತಿಳ್ಕೊಂಡ್ಬಿಟ್ಟಿದಾರೋ ಏನೋ! ಒಂದ್ಸಾವಿರ, ಒಂದ್ಸಾವಿರ, ಒಂದ್ಸಾವಿರ ಹುಡಿಗ್ಯೋರು ಸಿಗ್ತಾರೆ. ದಮ್ಮಯ್ಯ ಅಂತ ಕಾಲ್ಮೇಲ್ಬಿದ್ದು ಕೊಡ್ತಾರೆ. ಅಲ್ಲ ಹೆಣ್ಣುಡ್ಡೋರ್ಗೇ ಇಷ್ಟು ದಿಮಾಕಿರ್ಬೇಕಾದ್ರೆ, ಗಂಡ್ನೋರು ಅನ್ನಿಸ್ಕೊಂಡ್ನಮಗಿನ್ನೆಷ್ಟು ಇದಿರ್ಬೇಕೇ? ಹೋಗ್ಲಿ.

**ನಾರ** :— ಹೌದು. ಹೌದು. ನೀವ್ಹೇಳಿದ್ದಾನೂ ಒಪ್ದೆ. (ವಿ.ರಾ.ಗೆ) ತಾವು ದಯವಿಟ್ಟು ಕ್ಷಮಿಸ್ಬೇಕು. ನಮ್ಮ ರಾಮೂಗೆ ನಾವು ಬೇರೆ ಯಾರಾದ್ರೂ ಸಂಸಾರಕ್ಕೆ ಯೋಗ್ಯಳಾಗಿರೋ ಹುಡ್ಗೀನ ತಂದ್ಕೋತೀವೆ. ತಾವು ಹೋಗಿ ಬರಬಹುದು.

**ರಾಮು** :— ಓ........ I am sorry.... (ವಿ.ರಾ.ಗೆ) ದಯವಿಟ್ಟು ಕ್ಷಮ್ಸಿ. Hopeless People! Hopeless People!! (ಒಳಗೆ ಹೊರಟು ಹೋಗುವನು)

**ನಾರ** :— ಏನೂ, ಏನೂ, ಏನಂದ ಅವ್ನು? ಅಪ್ಪಿಸ್ಬಿಡ್ತಾನಂತ್ಯೇ ನಮ್ಮನ್ನ? ಅಪ್ಪಿಸ್ಬಿಡ್ತಾನಂತ್ಯೇ? ನೋಡಿದ್ಯೇನೇ ನಿನ್ನ ಮಗನ ಇಂಗ್ಲೀಷು?

**ಜೋಯಿಸ** :— ಹಾಗಲ್ಲ, ನಾರಣಪ್ನೋರೇ ...

**ನಾರ** :— ಹಾಗೂ ಅಲ್ಲ, ಮುಪ್ಪಾಗ್ಲೂ ಅಲ್ಲ. ಈ ಬಣ್ಣದ ಬೊಂಬೆ ನಮಗೆ ಪ್ರಯೋಜನವಿಲ್ಲಾಂದ್ರೆ.

**ಸುಬ್ಬಕ್ಕ** :— ಇಷ್ಟಕ್ಕೂ ಅವರಿಗ್ಯಾಕೆ ಅಧಿಕಪ್ರಸಂಗತನ? ತೊಗೊಳ್ಳೋರಲ್ಲ, ಕೊಡೋರಲ್ಲ.

**ಜೋಯಿಸ** :— ಹೌದಮ್ಮಾ. ಆದ್ರೆ ಕೊಡೋರ್ಗೂ ತೊಗೊಳ್ಳೋರ್ಗೂ ಮಧ್ಯೆ ನಾವಿದ್ದೇ ಇರ್ತೀವೆ ಅಂತನ್ನೋದು ನಿಮಗೆ ಮರ್ತ್ಹೋಗಿರ್ಬಹುದು.

ವಿ. ರಾ:— ಸಮಾಧಾನ, ಜೋಯಿಸ್ರೇ. ಮಾತು ಬೆಳೆಸಿ ಏನು ಪ್ರಯೋಜನ? (ನಾರಣಪ್ಪನಿಗೆ) ತಮ್ಮಿಷ್ಟದಂತೆ ತಮ್ಮನಸ್ಸಿಗೆ ತಕ್ಕಂಥಾ ಕನ್ಯೇನ ತಾವು ತಂದ್ಕೊಳ್ಳೋದು ನಮ್ಗೂ ಸಂತೋಷವೇ. ಆಗಲಿ. ನಾವು ತಮಗೆ ತೊಂದ್ರೆ ಕೊಟ್ವಿ. ಹೆಣ್ಣು ಡ್ತೋರ್ಸ್ದಾವು. ಮಾನವಾಗ್ಲಿ ಅವಮಾನ್ವಾಗ್ಲಿ ನಾವು ತೊಂದ್ರೆ ಕೊಡ್ಲೇಬೇಕು. ಕ್ಷಮ್ಸಿ, ನಾವ್ಬರ್ತೇವೆ. ಬಾಮ್ಮ ಮೀನಾ!

ಕಮಲು:— (ಪಾರ್ವತಿಗೆ) ನಾವ್ ಬರ್ತೇವಮ್ಮ.

ಪಾರ್ವತಿ:— ನನ್ಗೇನೋ ಇಷ್ಟವಿತ್ತು. ಆದ್ರೆ....

ಕಮಲು:— ಏನ್ಮಾಡೋದಮ್ಮ, ಬ್ರಹ್ಮ ಹಣೇಲಿ ಬರೀಲಿಲ್ಲ. ಬರ್ತೇವೆ. ನಡಿ ಮೀನಾ.

(ವಿ.ರಾ., ಕಮಲು, ಮೀನಾ ಬಾಗಿಲು ಸಮೀಪಿಸಲು)

ಸುಬ್ಬಕ್ಕ:— ಲೇ, ಪಾತೂ, ಏನ್ ಮಂಕ್ಬಡ್ಕೊಂಡ್ಹೋಗುತ್ಯೇ ನಿಮ್ಗೆ? ಮನೇಗೆ ಬಂದೋರ್ಗೆ ಕುಂಕುಮ ಕೊಟ್ಟು ಕಳಿಸ್ಬೇಕೂನ್ನೋದೂ ತೋರೋದಿಲ್ವೇನೂ?

ಪಾರ್ವತಿ:— (ಕಮಲೂಗೆ) ಒಂದ್ನಿಮಿಷ.

(ಒಳಗೆ ಹೋಗಿ ಕುಂಕುಮದ ಭರಣಿ ತಂದು ನೀಡುವಳು. ಮೀನಾ, ಕಮಲು ಸಂಜ್ಞೆಯಲ್ಲೇ ಹೋಗಿ ಬರುವೆವೆಂದು ತಿಳಿಸಿ ವಿ.ರಾ., ಜೋಯಿಸ, ಮೀನಾ ಸಮೇತ ನಿಷ್ಕ್ರಮಿಸುವರು)

## ದೃಶ್ಯ ೪

[ರಸ್ತೆ. ವಿನಾಯಕರಾಯರೂ, ಜೋಯಿಸರೂ ಪ್ರವೇಶಿಸುವರು]

ಜೋಯಿಸ:— ಅನ್ಯಾಯ....ಅನ್ಯಾಯ....ಶುದ್ಧ ಅನ್ಯಾಯ. ಗಂಡ್ಸು ಹಡದ್ಬಿಟ್ರೆ ಅಂತಂದ್ರೆ ಕೋಡು ಬೆಳ್ದೋರ್ಗಿಂತ ಹೆಚ್ಚಾಗಾಡ್ತಾರಲ್ಲ! ಇವರ್ಗೇನೇಲೂ ಒಂದ್ಹೆಣ್ಣಿದ್ದಿದ್ರೆ, ಆದರ ಕಷ್ಟ ಸುಖ ಗೊತ್ತಾಗ್ತಿತ್ತು.

ವಿ. ರಾ :— ನನ಼್ಗೇ ಕೋಪ ಅನ್ನೋದುಕ್ಕಿಬರ್ತಾ ಇರೋದು ತಡ್ಕೊಂಡೆ. ಬೇಡ ಅನ್ನಿಸ್ಕೊಂಡಿರೋದು ಇದು ಮೊದಲ್ನೆ ಸಲ ಅಲ್ಲ. ಆದ್ರೀರೀತಿ ಅವಮಾನ ಮಾಡಿಸ್ಕೊಂಡಿದ್ದು....

ಜೋಯಿಸ :— ನನ್ಗೇ ತಡೀಲಿಲ್ಲ ಅಂತೀನೇ. ನೀವಾವಾಗ "ಸಮಾಧಾನ ಸಮಾಧಾನ" ಅನ್ನ್ದೆ ಇದ್ದಿದ್ರೆ ಚೆನ್ನಾಗಿ ಪಾಠ ಕಲಿಸ್ತಾ ಇದ್ದೆ. ಇವ್ರು ಪೂರ್ವ ಕಾಲ್ದವ್ರು ಅಂತ ಗೊತ್ತಿತ್ತು. ಆದ್ರೆ ಹುಡುಗ ಒಳ್ಳೆವನು; ಅವನ ತಾಯಿ ಒಳ್ಳೆ ಆಕೆ; ಇನ್ನು ಜಾತ್ಕಗ್ಳೋ ವಸಿಷ್ಟ ಅರುಂಧತಿ ಜಾತ್ಕಗ್ಳಿಗಿಂತ ಚೆನ್ನಾಗಿ ಕೂಡುತ್ತೆ; ಲಗ್ನ ಸುಸೂತ್ರವಾಗಿ ನಡೀಬಹುದು ಅಂತ ಕರ್ಕೊಂಡ್ಬಂದೆ.

ವಿ. ರಾ :— ಈಗೇನ್ ಮುಗೀತ್ಲಲ್ಲ.

ಜೋಯಿಸ :— ಹನ್ನೆರಡ್ಮನೆಗ್ಳಲ್ಲಿ ಎಲ್ಲಾ ಗ್ರಹಗಳ ಬಲಾಬಲ ಫಲಾಫಲ ನೋಡ್ಕೊಂಡೆ. ಆ ಹದಿಮೂರ್ನೇ ಗ್ರಹ, ಎಲ್ಲೋ ತೀರ್ಥ ಯಾತ್ರೇಗ್ಹೋಗಿದ್ದದ್ದು, ಆ ಸಮಯಕ್ಕೆ ವಕ್ರಿಸುತ್ತೇಂತ ತಿಳೀಲಾರ್ದೆ ಹೋದೆ.

ವಿ. ರಾ :— ಆಕೆ ವರ್ತನೆ ಅಸಹ್ಯವಾದರೂ ನನಗವರ್ಮೇಲೆ ಅಷ್ಟು ಆಗ್ರಹ ಇಲ್ಲ. ಯಾಕಂದ್ರೆ ಆ ವರ್ತನೇಗೆ ಅವರ ಸ್ಥಿತಿಯೇ ಕಾರಣ. ತನ್ನ ಮನೆ, ತನ್ನ ಮಕ್ಳು, ತನ್ನ ಗಂಡ ಅಂತ ಅನ್ನೋದು ಯಾವಾಗಿರೋಕೆ ಅವಕಾಶ ತಪ್ಪುತ್ತೋ, ಸ್ವಾಭಾವಿಕವಾಗಿ ಹೃದಯ ಮನಸ್ಸು ಹೀಗೆ ಪರಿವರ್ತನೆ ಆಗುತ್ತೆ. ಆದ್ರಾತ! ಮನೆ ಯಜಮಾನ!! ಅವರ ಹಾಡಿಗೇ ತಾಳ ಹಾಕಿ ಕುಣಿದದ್ದು ನಾನೊಪ್ಪೋಲ್ಲ. ನಾನೊಪ್ಪಿದ್ರೆಷ್ಟು ಬಿಟ್ರೆಷ್ಟು? ಒಟ್ನಲ್ಲಿ, ಪೂರ್ವ ಜನ್ಮದ ಪಾಪದ ಫಲ; ಹೆಣ್ಣು ಹಡೆದದ್ದುಂಟು; ಅನುಭವಿಸ್ಬೇಕು; ಅನುಭವಿಸ್ತೀವೆ.

ಜೋಯಿಸ :— ಹಾ ಹಾ ಹಾ, ನಾನಾಮಾತೊಪ್ಪೋಲ್ಲ. ಹೆಣ್ಮಕ್ಳು ಲಕ್ಷ್ಮೀ ಸಮಾನ. ಇಂಥ ಅವಿವೇಕಿಗ್ಳ ನಡವಳಿಕೆ ಇಂದ ನಮಗೆ ತತ್ಕಾಲಕ್ಕೆ ಹೀಗನ್ನಿಸಬಹುದೇ ಹೊರ್ತು, ಗಂಡ್ಮಕ್ಳು ನಮಗೆ ಹೊರಿಸ್ಕೊಡೋ ಸಂತೋಷವೂ ಅಷ್ಟರಲ್ಲೇ ಇದೆ. ಹೆಂಡ್ತಿ ಗೃಹಪ್ರವೇಶ ಮಾಡ್ತಾ ಇದ್ದಾ

ಗೇನೇ, ಹಿತ್ಲ ಬಾಗಿಲು ತೆಗೆದಿಟ್ಟಿರ್ತಾರ್ನಮಗೆ, ವಾನಪ್ರಸ್ತಾಶ್ರಮಕ್ಕೆ ಹೊರಡೋಕೆ.

ವಿ. ರಾ:— ಯಾರ್ಬ್ಯೇಡ ಅಂತಾರೆ. ನಾವು ಹೊರಟಾದ್ರೂ ಹೋದೇವು, ಇವರು ಲಕ್ಷಣವಾಗಿ ಗೃಹ ಪ್ರವೇಶ ಒಂದ್ಮಾಡೋದಾದ್ರೆ. ಆದ್ರದಕ್ಕೇ ಅಡ್ಡೀ ಬರೋ ಈ ವಕ್ರ ಗ್ರಹಗಳ್ಣೇನ್ಮಾಡೋಣ ?

ಜೋಯಿಸ:— ನನಗೊಂದ್ತೋಚುತ್ತೆ— ಈ ಕುಂಟ ಶನೀಗೆ ಹ್ಯಾಗೆ ಎಳ್ಳೆಣ್ಣೆ ದೀಪ ಹಚ್ತೇವೋ, ಹಾಗೇ ಈ ಲಗ್ನ ಕಂಟಕ ತುಂಟ ಶನಿಗಳಿಗೆ ಸೀಮೇ ಎಣ್ಣೆ ಸುರಿದು....

ವಿ. ರಾ:—ಹಹಹಹಹ....ಅನ್ನಿಸತ್ತಾಗೆ....ನಿಜವೇ.... ಇವುಗಳ್ಗೂ ಒಂದ್ಕಾಲ ಅನ್ನಿ. ಪತಂಗದ ಹುಳುಗಳು ಹಾರುತ್ವೆ. ದೀಪದ್ಹತ್ರ ಬರುತ್ವೆ. ರೆಕ್ಕೆ ಸುಟ್ಕೊಂಡು ಮೆತ್ತಾಗಿ ನೆಲಕ್ಬಿದ್ದು ಹರಿದಾಡುತ್ವೆ. ಹಾಗೇ ಇವ್ರೂ ಅಜ್ಞಾನ, ಗಂಡಿನ್ಕಡ್ಯೋರೂ ಅನ್ನೋ ದುರಹಂಕಾರ, ಈ ರೆಕ್ಕೆಗಳ್ನ ಕಟ್ಕೊಂಡ್ಹಾರಾಡ್ತಾರೆ. ಇವರ್ಗೂ ಒಂದು ದೀಪದ ಬೆಳಕು ಕಂಡ್ರೆ, ಕೊಬ್ಬೆಲ್ಲಾ ಕರಗಿ ತಲೇಲ್ನಡ್ಯೋದನ್ಬಿಟ್ಟು ಕಾಲ್ನಲ್ನಡ್ಯೋಕೆ ಪ್ರಾರಂಭಿಸ್ತಾರೆ.

ಜೋಯಿಸ:— ನಿಜ. ನಿಜಅನ್ನಿ. ನಡೀರಿ. ಮನೇಗ್ಹೋಗಿ ಪಾಪ ಆ ಹುಡಗೀಗೆ ಒಂದಿಷ್ಟು ಸಮಾಧಾನವಾದ್ರೂ ಹೇಳೋಣ.

ವಿ. ರಾ:— ಹುಂ....ಏನ್ ಸಮಾಧಾನವೋ, ಏನ್ಹೇಳೋದೋ, ನಡೀರೀ. (ನಿಷ್ಕ್ರಮಿಸುವರು)

## ದೃಶ್ಯ ೫

[ಸ್ಥಾನ: ಒಂದನೆಯ ದೃಶ್ಯದಂತೆ ಮೀನಾ ದುಃಖದಲ್ಲಿದ್ದಾಳೆ. ಕಿಟ್ಟಿ, "ಶ್ಯಾಕಾರನ್ ಹೈ ಅಬ್ ರೋನೇಕಾ" ಹಾಡುತ್ತಾ ಪ್ರವೇಶಿಸಿ, Dressing tableಗೆ ಹೋಗಿ crop ಬಾಚಿಕೊಳ್ಳುತ್ತಿರಲು, ಮೀನಾ ಅಳುತ್ತಾ ಬಿಕ್ಕುವ ಶಬ್ದ ಕೇಳಿ ಬರುವುದು. ತಕ್ಷಣ ಆ ಕಡೆ ತಿರುಗಿ ಸಮೀಪಿಸುತ್ತಾ]

**ಕಿಟ್ಟಿ** :— ಮೀನಾ !........ ಮೀನಾ ! ಯಾಕಳ್ತಿದ್ದೀಯೇ ?........ ಅವ್ಮಾ !

**ಕಮಲು** :— (ಬಾಗಿಲಲ್ಲಿ ಕಾಣಿಸಿಕೊಂಡು) ಮೀನಾ ! (ಮುಂದೆ ಬರುತ್ತಾ) ಅಳ್ಬೇಡ ಸುಮ್ನಿರಮ್ಮ. ಅತ್ತೇನ್ ಪ್ರಯೋಜ್ನ ? ಆಗ್ಹೋಯ್ತು. ಇನ್ಮೇಲೆ ಬೇಕಾದ್ದಾಗ್ಹೋಗ್ಲಿ, ಇನ್ನೊಬ್ರ ಮನೆ ಬಾಗಿಲಿಗೆ, ನಿನ್ನ ಕರ್ಕೊಂಡ್ಹೋಗೋಲ್ಲ. ದೇವರು ಮಾಡ್ಸಿದ್ದಾಗಾಗ್ಲಿ. ಸುಮ್ನಿರು. ಸುಮ್ನಿರಮ್ಮ ಜಾಣೆ. ನಿಂಗೆ ಅವಮಾನವಾದ್ರೆ ನಮ್ಗೂ ಆದ್ಹಾಗೇ ಅಲ್ವೇನೂ ?

**ಕಿಟ್ಟಿ** :— ಅವಮಾನ ? ಏನಮ್ಮ ಇದು ನಂಗರ್ಥವಾಗೊಲ್ವೇ ? ಯಾರೀಗಿವಳಿಗೆ ಅವಮಾನ ಮಾಡಿದ್ದು ? ಯಾಕೆ ? .......

**ಕಮಲು** :— ಏನಿಲ್ಲಪ್ಪ. ನಮ್ಮ ಜೋಯಿಸ್ರು, 'ಯಾವ್ದೋ ವರ ಇದೆ' ಅಂದ್ರು. ಕರ್ಕೊಂಡ್ಹೋಗಿದ್ವಿ.

**ಕಿಟ್ಟಿ** :— ಹೂ, ಹೂ, ಹೂ, ಸಿದ್ದ ಹೇಳ್ದ. ಹೂ ?

**ಕಮಲು** :— ಅಲ್ಲಿ ಅವರ ಮನೇಲಿ (ದುಃಖದಿಂದ) ಹುಚ್ಚು ಚ್ಛಾಚ್ಚಾ ಗ್ಮಾತಾಡಿ... ಅವಳ್ನ ಗೋಳ್ಹೊಯ್ಕೊಂಡೂ....

**ಕಿಟ್ಟಿ** :— ಓ! ಅಪ್ಪ ಬಂದಿಲ್ಲಿಲ್ಲ ?

**ಕಮಲು** :— ಬಂದಿದ್ರಪ್ಪಾ. ಅವ್ರೂ ಜೋಯಿಸ್ರೂ ನಡ್ಕೊಂಡ್ಬರ್ತಿದಾರೆ.

**ಕಿಟ್ಟಿ** :— ಮತ್ತೆ.... ಅವರು ಸುಮ್ನಿದ್ರೇ ?

**ಕಮಲು** :— ಸುಮ್ನಿರ್ದೆ ಏನ್ಮಾಡಾರಪ್ಪ ?

**ಕಿಟ್ಟಿ** :— ಹೂ, ಆಗೋ ಆ Spirit ಇಟ್ಕೊಂಡಿದ್ದಿದ್ದಕ್ಕೇ ಹೀಗ್ಬಂದಿದ್ದು ನೀವು. ನಾನಾಗಿದ್ರೆ ಚಮ್ಡ ಸುಲಿದ್ ತಮಟೆ ಕಾಯಿಸ್ಬಿಡ್ತಾ ಇದ್ದೆ. ಅದಿರ್ಲಿ, ಯಾರ್ಮನೇಗ್ನೀವ್ಹೋಗಿದ್ದಿದ್ದು ?

**ಕಮಲು** :— ನಾರಣಪ್ನೋರು ಅಂತ.

**ಕಿಟ್ಟಿ** :— ನಾರಣಪ್ನೋರು ?

**ಕಮಲು**:— ಹೂ. ಶಾನುಭೋಗ್ಕೆ ಇತ್ತಂತೆ.

**ಕಿಟ್ಟಿ** : — **ಶಾನುಭೋಗ್ಕೆ ಇತ್ತಂತೆ ?** ಆ ಹುಡುಗನ ಹೆಸರು ?

**ಕಮಲು** :— ರಾಮು ಅಂತೆ ... ರಾಮ್ಮೂರ್ತಿ ಅಂತೆ.

**ಕಿಟ್ಟಿ** :— ರಾಾಾಮು ! ಉಂೂೂೂ ! ಸರಿ....

**ಕಮಲು** :— ಯಾಕೆ, ನಿಂಗೊತ್ತೇನಪ್ಪ ಅವ್ನು ?

**ಕಿಟ್ಟಿ** :— (ಸ್ವಗತದಂತೆ) ಅವರ್ಮನೇಗೇ ನೀವ್ಹೋಗಿದ್ದಿದ್ದು ? (ತಾಯಿಗೆ) ನಂಗೊತ್ತವ್ಮ್ಮಾ ಅವ್ನು. ಗೊತ್ತು. ಅನ್ನೇನಂದ, ಅಮ್ಮ ?

**ಕಮಲು** :— ಒಳ್ಳೇ ಹುಡುಗ ಅಂತ್ಕಾಣ್ತಪ್ಪಾ. ಅವನ ತಾಯೀನೂ ಅಷ್ಟೆ. ಆಕೇನೂ ಒಳ್ಳೇ ಆಕೆ. ಇಬ್ರೂ ನಮ್ಕಡೇನೇ ಎಷ್ಟೋ ಹೇಳಿದ್ರು. ಆದ್ರಾತ, ಅವರತ್ತೆ ಒಂದ್ಮಾತಿಗೆ ಆಸ್ಪದ ಕೊಡ್ದೆ....

**ಕಿಟ್ಟಿ** :— ಬಿಡಮ್ಮ ಅವರ್ನತ್ಲಾಗೆ. ರಾಮು ಸರಿಯಾಗಿದ್ದ ಅನ್ನು.

**ಕಮಲು** :— ಅಯ್ಯೋ ಪಾಪ.... ಒಳ್ಳೇ ಹುಡುಗ.

**ಕಿಟ್ಟಿ** :— ಸರಿ. ಹಾಗಾದ್ರೆ, ಅಮ್ಮಾ, ಒಂದ್ವೇಳೆ ಈ ಮದ್ವೆ ಆಗೋದಾದ್ರೆ ನಿಂದೇನೂ ಅಭ್ಯಂತ್ರ ಇಲ್ವಲ್ಲವ್ಮಾ ?

**ಕಮಲು** :— ಇನ್ನೇನ್ಮದ್ವೇನೋ ಆಗೋದು ? ಆಯ್ತಲ್ಲ ಆರತಿ ಎತ್ತಿಸ್ಕೊಂಡ್ಬಂದಿದ್ದು.

**ಕಿಟ್ಟಿ** :— ಒಂದೇ ಆರತೀಗೆ ಮುಗಿಸ್ಬಿಡ್ತೀರೇನಮ್ಮಾ ? ನಿನ್ನೊಪ್ಗೆ ಹೇಳು. ಉಳಿದಿದ್ದು ನನಗ್ಬಿಡು.

**ಕಮಲು** :— ಆಗಿದ್ದಿದ್ರೆ ಚೆನ್ನಾಗಿತ್ತಪ್ಪ.

**ಕಿಟ್ಟಿ** :— ಸರಿ. ನೀನಿನ್ನು ಒಳಗ್ಹೋಗು. ಹೋಗಮ್ಮ ನೀನು. ಇನ್ನು ಮೂರ್ನಿಮಿಷ್ದಲ್ಲಿ ಬರ್ತೀನಿ ಹೋಗು.... (ಕಮಲು ನಿಷ್ಕ್ರಮಿಸುವಳು) ಮೀನಾ ! ........ ಮೀನಾ !! (ಪಕ್ಕದಲ್ಲಿ ಬಂದು ಕುಳಿತು) ಅಳೇ, ಅಳೇ, ಸ್ವಲ್ಪ ಗಟ್ಟಿಯಾಗಳೇ ! ಮಗ್ಗುಲ್ಮನೆಯೋರ್ಗೆಲ್ಲಾ ಕೇಳ್ಲೇ.

ಮೀನ :— ಹೋಗೋ !

ಕಿಟ್ಟಿ :— ಪೆಚ್ಚಿ. ನೀನ್ಹೀಗಳೋ ಜಾತಿ ಅಂತಿಳ್ಕೊಂಡೇ ಅಳ್ಸಿದ್ನಿನ್ನ. ಎಂದೇ ನಿಮ್ಗೆ ಧೈರ್ಯ ಬರೋದು ? ನಿನ್ನ ಅಳಿಸ್ಪೋರ ಕಣ್ಣಲ್ಲಿ ನೀರ್ತರ್ಸಿ ಸಾಲ ತೀರಿಸ್ಬಿಡ್ಬೇಡ್ವೇನೇ ? ನೀನಿವತ್ಹೋದಿ. ಅನ್ನಿಸ್ಕೊಂಡ್ಬಂದಿ. ಸುಮ್ನಿದ್ಬಿಟ್ಟು, ನಾಳೆ ನಿನ್ನ ಸ್ನೇಹಿತ್ರೇ ಇನ್ಯಾರಾದ್ರೂ ಅವರ್ಮನೇಗ್ಹೋದ್ರೆ ಅವಳ್ಗೂ ಅವಮಾನವಾಗೋಕೆ ಬಿಡ್ತೀ ಏನೇ ? ಪಾಠ ಕಲಿಸ್ಬೇಡ್ವೆ ಅವರ್ಗೆ ? ಅಲ್ದೆ, ರಾಮು ನನ್ನ friendಉ. ಜಾಣ. ಬುದ್ಧಿವಂತ. ಚೆನ್ನಾಗಿದಾನೆ. ಮದ್ವೆ ಮಾಡ್ಕೊಳ್ಳೋನವ್ನು. ಮುಂದೆ ನೀನ್ ಸಂಸಾರ ಮಾಡೋದವನ ಜೊತೇಲಿ. ಅವ್ನು ನಿನ್ನಡೇನೇ ಇದ್ದ ಅಂದ್ರು ಅಮ್ಮ. ಕಾಟ ಕೊಡೋ ಅತ್ತೇನೂ ನಿನ್ನ ಮೆಚ್ಚಿದ್ರು ಅಂದ್ರು. ಇನ್ನೇನೇ ? ಬಾಕಿಯೋರ ವಿಚಾರ ನನಗ್ಬಿಡು. ಈಗ್ನಿನ್ನಿಷ್ಟು ಹೇಳು. ರಾಮೂನ........

ಮೀನ :— ಹೋಗೋ, ನೀನ್ ತಿರಿಗಿ ಅದನ್ನೆಲ್ಲಾ ಕೇಳ್ಬೇಡ.

ಕಿಟ್ಟಿ :— ತಿರ್ಗಿ ಅಲ್ಲ, ಮೀನಾ, ನಾನಿದೇ ಮೊದಲ್ನೇ ಸಾರಿ ನಿನ್ನೇಳ್ತಾ ಇರೋದು. ಹೇಳು.

ಮೀನ :— ನಾನೇನ್ಹೇಳೋದು ? ನನ್ಕೇಳೇ ಕರ್ಕೊಂಡ್ಹೋದ್ರೇನೋ !

ಕಿಟ್ಟಿ :— ಸರಿ. ಹಾಗಾದ್ರೆ ನಿನ್ಕೇಳ್ದೇನೇ ಮದ್ವೆ ಮಾಡಿಸಬಹುದು ಅನ್ನೋಕೆ ಅನುಮತಿ ಸಿಕ್ಕಾಗ್ಹಾಯ್ತು. ಬಾ, ಏಳು....ಹೂ....ನೀವಲ್ಲೀಗೆ ಹೋದಾಗ್ನಿಂದ ಏನೇನಾಯ್ತು ಅಂತ ಒಂದ್ point ಊ ಬಿಡ್ದೆ detail ಆಗ್ಹೇಳು. ಅದಕ್ಕೆ ಸರಿಯಾಗಿ ನಾವೂ ಒಂದ್ನಾಟ್ಕ ಮಾಡೋಣ. ಬಾ, ಪ್ರಾರಂಭವಾದ ಮುಹೂರ್ತದಲ್ಲೇ ಕೆಲ್ಸ ಮುಂದಕ್ಕೆ ತೊಗೊಂಡ್ಹೋರಟ್ಹೋಗೋಣ. ಬಾ.

(ಮೀನ, ಕಿಟ್ಟಿ ಒಳ ಬಾಗಿಲಲ್ಲಿ ನಿಷ್ಕ್ರಮಿಸುವರು. ಬೀದಿ ಬಾಗಿಲಿಂದ ವಿ. ರಾ. ಮತ್ತು ಜೋಯಿಸ ಪ್ರವೇಶಿಸುವರು)

ವಿ. ರಾ :— ಮೀನಾ !........... ಪಾಪ, ಎಲ್ಲೋ ಒಳಗಳ್ತಾ ಇದಾಳೇಂತ್ಕಾಣತ್ತೆ.

ಜೋಯಿಸ:— ಪ್ಚ, ಪ್ಚ....ಪಾಪ....ನಿಮ್ಹುಡುಗ ಇವತ್ತು ಬರ್‍ತಾನೆ ಅಂದಿದ್ರಲ್ಲ?

ವಿ. ರಾ:— ಹು ಹು, ಬಂದಿರ್ಬೇಕು. (ಒಳ ಬಾಗಿಲಿಂದ ಪ್ರವೇಶಿಸಿ ಬೀದಿ ಬಾಗಿಲು ಕಡೆ ಹೋಗುತ್ತಿರುವ ಸಿದ್ದನಿಗೆ) ಬಂದ್ರೇನೋ ಚಿಕ್ರಾಯ್ರು?

ಸಿದ್ದ:— ಬಂದ್ರು, ಬುದ್ದಿ.... ... ಒಳಗೌರೆ ಅವ್ರೋರ್ನ್ಕಟಿ ಮಾತಾಡ್ತೌರೆ. (ನಿಷ್ಕ್ರಮಿಸುವನು)

ಜೋಯಿಸ:— ನಿಮ್ಮ ಸೊಸೇನ್ನರ್ರೋ ಯೋಚ್ನೆ ಮಾಡಿಲ್ವೋ? ಅವನ್ದೂ ಓದೆಲ್ಲಾ ಆಯ್ತೇನೋ ಈ ವರ್ಷಕ್ಕೆ?

ವಿ. ರಾ:— ಆಯ್ತು. ಅವರ ಮಾವನೂ ಕಾಗದ ಬರೆದಿದ್ರು. Probationers ನ ತೊಗೋತಾರೀಗ. ಅದಕ್ಕೇ ಪಾರ್ಟಿ ಮಾಡಿದಾರಂತೆ. Result ಬರ್ಲಿ ಅಂತ ಕಾದಿದಾರೆ. ನನಗೆ ಈ ಮಗಳ ಮದ್ವೆ ಯೋಚ್ನೇಲಿ ಆ ಸೊಸೇ ವಿಷಯ ಮನಸ್ಸಿಗೆ ಹಚ್ಕೊಳ್ಳೋಕೆ ಪುರಸೊತ್ತೇ ಇಲ್ದೆ ಹೋಗಿದೆ.

ಜೋಯಿಸ:— ಅಯ್ಯೋ, ಅದಕ್ಕೂ ಇದಕ್ಕೂ ಯಾಕೆ ಸಂಬಂಧ ಹಾಕ್ತೀರಿ? ಸೊಸೆ ಬರ್ಲಿ. ಅವಳು ಹೊಸಲೊಳಗೆ ಬರೋ ಪುಣ್ಯ ಫಳಿಗೆ ಇಂದ್ಲಾದ್ರೂ ಮಗಳ ಮದ್ವೆ ಸಲೀಸಾಗಾಗ್ಬಹುದ್ದೋ ಏನೋ!

ಸಿದ್ದ:— (ಪ್ರವೇಶಿಸಿ) ಬುದ್ದಿ, ಯಾರೋ ತಮ್ಮನ್ನ ಕೇಳ್ಕೊಂಡ್ ಬಂದೌರೆ.

ವಿ. ರಾ:— ಯಾರೋ ಅದು?

ಸಿದ್ದ:— ಬ್ಯಾಟಡ್ಕೊಂಡೌರೆ....

ವಿ. ರಾ:— ಓಹೋ, ಡಾಕ್ಟರೇನೋ. ಬಂದೆ, ಒಂದ್ನಿಮಿಷ ಜೋಯಿಸ್ರೇ.

ಜೋಯಿಸ:— ಹೋಗ್ಬನ್ನಿ, ಹೋಗ್ಬನ್ನಿ. (ವಿ. ರಾ. ಮತ್ತು ಸಿದ್ದ ನಿಷ್ಕ್ರಮಿಸುವರು. ಜೋಯಿಸ ಉಡಿಯಿಂದ ಪಂಚಾಂಗ ಎಳೆದು, ನೋಡುತ್ತಾ, ಗುಣಿಸುತ್ತಾ, ಏನೇನೋ ಗೊಣಗಿಕೊಳ್ಳುವನು) ಮತ್ತೇ. ಇದೇನ್ ಶಾಸ್ತ್ರಾನೋ ಮಷ್ಕಿರೀನೋ!

(ವಿ.ರಾ. ಪ್ರವೇಶಿಸಲು) ರಾಯರೇ, ನೀವೇನ್ಹೇಳಾದ್ರೂ ಹೇಳಿ, ಇವ್ರಿಬ್ರ ಪೈಕಿ ಯಾರ್ಗಾದ್ರೂ ಬೇರೆ ಮದ್ವೆ ಆಗೋತನಕ, ಇವ್ರ ಮದ್ವೆ ಆಗೋಲ್ಲ ಅಂತ ನಾನ್ನಂಬೋಲ್ಲ. ಹೇಳಿ ಮಾಡಿಸಿದ್ದಾಗಿದೆ ದಂಪತಿ. "ಇಲ್ಲ" ಅಂತಿವತ್ಗೇನೋ ಆಗಿದೆ. ಇರ್ಲಿ. ಪರಮೇಶ್ವರನ ವ್ಯಾಪಾರ ವಿಚಿತ್ರ. ಇನ್ನೊಂದ್ ಘಳಿಗೇಲಿ "ಉಂಟು" ಅನಿಸ್ಯಾನು !

(ಕಿಟ್ಟಿ, ಕಮಲು ಬಾಗಿಲಲ್ಲಿ ಕಾಣಿಸಿಕೊಳ್ಳುವರು)

ಕಿಟ್ಟಿ :— ನಾನ್ಹೇಳಿದ್ದೆಲ್ಲಾ ಜ್ಞಾಪ್ಕ ಇದೆತಾನಮ್ಮ ? ಆ ಸೀರೆ ಮಗ್ಳು ಮನೆಇಂದ ತರಿಸ್ಬಿಡು. ಓಹೋ, ಹೇಳ್ಳಳ್ಸಿದ್ದೆ ಅಂದ್ಯೆಲ್ಲಾ..... .. ಇನ್ ಐದ್ನಿಮಿಷ್ದಲ್ಲಿ ಕರ್ಕೊಂಡ್ಬಂದ್ಬಿಡ್ತೇನೆ taxiಲಿ. (ಮುಂದೆ ಬರಲು)

ವಿ. ರಾ :— ಏನೋ ಅದು ? ಹ್ಯಾಗ್ಮಾಡಿದ್ದೀಯೋ ಪರೀಕ್ಷೇಲಿ ?

ಕಿಟ್ಟಿ :— ಪರೀಕ್ಷೇಲಿ ಚೆನ್ನಾಗ್ಮಾಡಿದೇನೆ. Pass ಆಗುತ್ತೆ. ಈಗ್ನೀವು ಮೀನಾನ "ವಧು ಪರೀಕ್ಷೇಗೆ" ಕರ್ಕೊಂಡ್ಹೋಗಿ fail ಮಾಡ್ಸಿ ಕರ್ಕೊಂಡ್ಬಂದ್ಬಿಟ್ಟಿದೀರಲ್ಲಾ ? ಏನ್, ಜೋಯಿಸ್ರೇ, ನೀವಿದ್ದೂ ಇಷ್ಟಕ್ಕೆ ಆಸ್ಪದ ಕೊಡಿಸ್ಬಿಟ್ರಲ್ಲಾ ?

ಜೋಯಿಸ :— ನಾವೇನೂ ಮಾಡೋಹಾಗೇ ಇರ್ಲಿಲ್ಲಪ್ಪಾ. ನಮ್ಮ ಮಾತು ಕಿವಿಗ್ಹಾಕ್ಕೊಂಡ್ರಲ್ವೇ ?

ಕಿಟ್ಟಿ :— ಗೊತ್ತಾಯ್ತು. ಎಲ್ಲಾ ವಿಷಯಾನೂ ತಿಳ್ಕೊಂಡೆ. ಈಗೇನ್ಮಾಡ್ಬೇಕೂಂತಿದೀರಿ ?

ಜೋಯಿಸ :— ಏನ್ಮಾಡೋದು ? ನನ್ಗಂತೂ ಒಂದೂ ತೋರೋದಿಲ್ಲಪ್ಪಾ. ನನ್ಮನಸ್ನಲ್ಲಿ ಜಾತಕಗಳ ಬಲ್ದ ಈ ಲಗ್ನ ಆಗ್ಲೇ ಬೇಕು ಅಂತ ಹೇಳ್ತಾ ಇದೆ.

ಕಿಟ್ಟಿ :— ಓಹೋ, ಅಷ್ಟು ಚೆನ್ನಾಗ್ಕೂಡತ್ತೆ ಜಾತ್ಕಗ್ಳು ಅನ್ನಿ ?

ಜೋಯಿಸ :— ನೀವು "Beshtಉ" "Beshtಉ" ಅಂತೀರಲ್ಲೋ, ಹಾಗ್ಕೂಡುತ್ತೆ.

ಕಿಟ್ಟಿ:— ಸರಿ. ಹಾಗಿದ್ರೆ ತುಂಬ ಸಂತೋಷ. ಏಳಿ, ಜೋಯಿಸ್ರೇ, ಲಗ್ನವಾಗುತ್ತೆ.

ವಿ. ರಾ:— ಆ ?

ಜೋಯಿಸ :— ಏನೋ ಇದು ? ಯಾಕೋ ? ಹ್ಯಾಗೋ ?!

ಕಿಟ್ಟಿ :— ನೀವ್ನಡೀರಿ, ನಾ ಹೇಳ್ತೀನಿ ಹಾದೀಲಿ. (ಬಾಗಿಲಿಗೆ ಹೊರಡಲು)

ವಿ. ರಾ :— ಕಿಟ್ಟೀ !

ಕಿಟ್ಟಿ :— ಅಮ್ಮೆಲ್ಲ್ಹೇಳ್ತಾಳೆ. ನಡೀರಿ ಜೋಯಿಸ್ರೇ (ಆತನನ್ನು ತಳ್ಳಿಕೊಂಡು ನಿಷ್ಕ್ರಮಿಸುವನು)

ವಿ. ರಾ :—(ಹಿಂಬಾಗಿಲಲ್ಲಿರುವ ಸತಿಯನ್ನು ಸಮೀಪಿಸುತ್ತಾ) ಲೇ !

ಕಮಲು :— (ಬಾಗಿಲು ಕಟ್ಟಿ) ಹಾ ಹಾ, ಅಲ್ಲೇ ನಿಂತ್ಕೊಳ್ಳಿ.

ವಿ. ರಾ :— ಆ ? ಇಲ್ಲೇ ನಿಂತ್ಕೋಬೇಕೇ ?

ಕಮಲು :— ಹೌದು.

ವಿ. ರಾ :— ಯಾಕೆ ?

ಕಮಲು :— ಒಳಗ್ಹೋಗ್ಬಾರ್ದು, ಅದಕ್ಕೆ.

ವಿ. ರಾ:— ಲೇ, ಏನ್ರೇ ಇದು ನಿಮ್ಮಾಟಾ ? ಅವ್ನೇನೋ "ಅಮ್ಮೆಲ್ಲ್ಹೇಳ್ತಾಳೆ" ಅಂದ್ಹೋದ. ನೀನು "ಒಳಗ್ಹೋಗ್ಬಾರ್ದು" ಅಂತ ಅಡ್ಡಿಹಾಕ್ಕೊಂಡ್ನಿಂತಿದ್ದಿ.

ಕಮಲು :— ಆ ರಾಮು ಇದಾನಲ್ಲ....

ವಿ. ರಾ :— ಯಾವ ರಾಮು ?

ಕಮಲು :— ಅವ್ನೇ, ಈಗ್ಹೋಗಿದ್ವಲ್ಲಾಂದ್ರೆ....

ವಿ. ರಾ :— ಹೂ.

ಕಮಲು :— ಅವ್ನೂ ನಮ್ಮ ಕಿಟ್ಟಿ ಸ್ನೇಹಿತ್ನಂತೆ.

ವಿ. ರಾ :— ಇರಬಹುದೂ.

**ಕಮಲು** :— ಬಹಳ ಒಳ್ಳೆ ಹುಡುಗನಂತೆ.

ವಿ. ರಾ :— ಸರೀ.

ಕಮಲು :— ನಮ್ಮಕ್ಡೇನೇ ಮಾತಾಡ್ದ ನೋಡಿ.

ವಿ. ರಾ :— ಹೌದೂ.

ಕಮಲು :— ಅವ್ನು ಹುಡ್ಗೀನ ಒಪ್ಪಿದ್ಹಾಗೇ ತೋರ್ಲಿಲ್ವೇ ?

ವಿ. ರಾ :— ತೋರಿರಬಹುದೇ.

**ಕಮಲು** :— ಅವನ ತಾಯಿಯೂ ಮದ್ವೆ ಆಗಿದ್ರೆ ಚೆನ್ನಾಗಿತ್ತು ಅನ್ಲಿಲ್ವೇ ?

ವಿ. ರಾ :— ಅಂದ್ರೇ. ಆದ್ರೀಗ ಆ ಮಾತು....

ಕಮಲು :— ಕೇಳಿ, ಹೇಳ್ತೀನೆ. ನಮ್ಮೀನಾನೂ ಒಪ್ಕೊಂಡಿದಾಳೆ.

ವಿ. ರಾ :— ಏನೂ ?

ಕಮಲು :— 'ಅತ್ತ, ಆ ಮುದುಕಿ ಅಷ್ಟು ಕೂಗಾಡಿದ್ರು ಅಂತ, ಅಂಥಾ ಒಳ್ಳೆ ಸಂಬಂಧ ಕಳ್ಕೋಬಾರ್ದು' ಅಂದ ಕಿಟ್ಟಿ. ಅವರ್ನಿಲ್ಲೀಗ್ಕರ್ಕೊಂಡ್ಬರ್ತಾನೀಗ.

ವಿ. ರಾ :— ಇಲ್ಲೀಗೇ ? ಅವರ್ನ ? **ಲ್ರೀ ಏನ್ ನಿಮ್ಗೇನ್ ಹೇಳ್ಕೇಳೋರ್ ಯಾರಿಲ್ವೇನೇ ? ಅಲ್ಹೋಗಷ್ಟು ಅನ್ನಿಸ್ಕೊಂಡ್ಬಂದ್** ಈಗ್ತಿರ್ಗ್ನೂನೂ ...ಸರಿ.... ಸರಿ.... ನಾನ್ಯಾಕೆ ಯಜಮಾನ **ಅಂತಿರ್ಬೇಕಿನ್ನು ?**

**ಕಮಲು** :— ಅಯ್ಯೋ, ಹಾಗಲ್ಲ ಅಂದ್ರೆ. ನಿಮ್ಮನ್ಕೇಳೋ ಅಷ್ಟು ಪುರಸೊತ್ತಿರ್ಲಿಲ್ಲ ಅಷ್ಟೆ. ನಮ್ಮ ಕೋಪದಲ್ಲಿ ಮೀನನ ಮುಂದಿನ ಆಲೋಚ್ನೆ ಬಿಡ್ಬಾರ್ದು.

ವಿ. ರಾ :— ಅದೇನ್ ಆಲೋಚ್ನೆಯೋ ! ಅದೇನ್ಕೋಪ್ವೋ !........ ನನಗೆ.... ನನಗೆ.... ಸ್ವಲ್ಪ ಸುಧಾರಿಸ್ಕೋತೀನೆ, ಒಂದ್ಲೋಟ ನೀರು ತೊಗೊಂಡ್ಬಾ.

ಕಮಲು :— (ಹಿಂಬಾಗಿಲ ತನಕ ಹೋಗಿ ಮನಸ್ಸು ಬದಲಾಯಿಸಿ) **ವೆಂಕಟಲಕ್ಷ್ಮೀ !**

ವಿ. ರಾ :— (ಕುರ್ಚಿಯಲ್ಲಿ ಬೆಚ್ಚಿ) ಆ ?

ಕಮಲು :— **ವೆಂಕಟಲಕ್ಷ್ಮೀ, ಮುಗೀಲಿಲ್ವೇನೇ ನಿನ್ನ ಅಲಂಕಾರಾ ?**

ವಿ. ರಾ :— ವೆಂಕಟಲಕ್ಷ್ಮೀ ? !

ವೆಂಕ :— (ಒಳಗಿಂದ) **ಆಯ್ತು, ಬಂದೇ ಅತ್ತೇ.**

ವಿ. ರಾ :— (ಕುರ್ಚಿಯಿಂದ ಹಾರಿ ಎದ್ದು) **ಅತ್ತೇ ? ! !**

ಕಮಲು :— **ನಿಮ್ಮಾವನಿಗೆ ಒಂದ್ಲೋಟ ಸೀನೀರು ತೊಗೊಂಡ್ಬಾವ್ಮ.**

ವಿ. ರಾ :— **ಮಾವನಿಗೇ ? ! ! ! ಲೇ ! Iceಉ Iceಊ ಹಾಕ್ಕೊಂಡ್ ತೊಗೊಂಡ್ಬಾನ್ನೇ ! ಲೇ ! ಇದೇನ್ ಮನೆಯೋ ಹುಚ್ಚಾಸ್ಪತ್ರೇನೇ ?**

(ವೆಂಕಟಲಕ್ಷ್ಮಿ ಹಿ ನೀರಿನ ಲೋಟ ಹಿಡಿದು ಪ್ರವೇಶಿಸುವಳು. ಕುಚ್ಚುಲದ ಸೀರೆಯುಟ್ಟಿದ್ದಾಳೆ. ಸಮನಾಗಿ ಇಬ್ಭಾಗ ಮಾಡುವ ಹೆರಳು ಮಧ್ಯ ಬೈತಲೆ. ಕೈಗ ದಪ್ಪ ಗಾಜಿನ ಬಳೆಗಳು. ತೋಳಿನ ತನಕ ಕುಪಸ. ತಲೆಯಲ್ಲಿ ಒಂದು ಕಂತೆ ಹೂ. ಕಾಸಿನಗಲದ ಕುಂಕುಮ. ಕೆನ್ನೆ ಗಲ್ಲಗಳಿಗೆ ಅರ್ಧಾಂಗುಲದ ಅರಶಿನ ಪಟ್ಟೆ. ಇತ್ಯಾದಿ)

ಅಯ್ಯಯ್ಯೋ ! ಇದೇನೇ ಇದು ? ಆ ಸೀರ್ಬೇಡಾ ನನ್ಗೇ ! ಏನೇ ಇದು ವೇಷಾ? **ಅಣ್ಣಮ್ಮನ ಗುಡಿ ಪೂಜಾರೀ........**

ಕಮಲು :— ಅಯ್ಯೋ, ಯಾಕಂದ್ರಿ ಹೀಗಂತೀರಿ ? ನಮ್ಮ ವೆಂಕಟ-ಲಕ್ಷ್ಮೀ ಅಲ್ವೇ ?

ವಿ. ರಾ :— **ವೆಂಕಟಲಕ್ಷ್ಮೀ ? ಯಾವ ವೆಂಕಟಲಕ್ಷ್ಮೀನೇ ? ಸಂಕಟವಾಗುತ್ತಲ್ಲೇ ನೋಡೋಕೇ !**

ಕಮಲು :— ಚೆನ್ನಾಯ್ತು, ನಮ್ಮಣ್ಣನ ಮಗಳೂ !

ವಿ. ರಾ :— **ಅಣ್ಣನ ಮಗಳೂ !**

ಕಮಲು :— ಹೂ, ಶೀನಣ್ಣನ ಮಗಳೂ !

ವಿ. ರಾ :— **ಶೀನಣ್ಣ**ನ ಮಗಳೂ ! ಆದ್ಯಾವ **ಶೀನಣ್ಣ**ನೇ ? ಇದ್ವರೆಗೂ ಇಲ್ಲದ ಶೀನಣ್ಣ ಅದೆಲ್ಲಿಂದ ಕವ್ಕೊಂಡ್ಬಂದ್ನೇ ? ಒಬ್ಳೇ ಮಗಳು ಅಂತಲ್ವೇನೇ ನಿನ್ನ ಮದ್ವೆ ಮಾಡ್ಕೊಂಡಿದ್ದಾನು ? ಸಾಧ್ಯವಿಲ್ಲ ! ಸಾಧ್ಯವಿಲ್ಲ.... ಸ್ವಲ್ಪ.... ಗಾಳಿ....ಗಾಳೀ.... (ನಿಷ್ಕ್ರಮಿಸುವನು. ಕಮಲು, ವೆಂಕಟಲಕ್ಷ್ಮಿ ಒಬ್ಬರನ್ನೊಬ್ಬರು ನೋಡಿ ನಗುವರು. ಹೊರಗೆ ಮೋಟಾರ್ ಹಾರನ್ ಶಬ್ದ. ಮರುಕ್ಷಣದಲ್ಲೇ ವಿ.ರಾ. ಒಳಗೋಡಿ ಬಂದು) ಆಯ್ಯಯ್ಯೋ ಬಂದೇಬಿಟ್ರಲ್ಲೇ ಅವ್ರು ! ಏನ್ಮಾಡೋದೇ ?

ಕಮಲು :—(ವೆಂಕ.ಗೆ) ನಡಿ ನಡಿ, ಒಳಗೋಡು. (ವೆಂಕ. ಓಡಲು, ಪತಿಗೆ ಅವಸರದಿಂದ) ಬನ್ನಿ, ಒಳಗ್ಬಂದ್ಬಿಡಿ. ನಾವಿಲ್ಲಿರೋಹಾಗಿಲ್ಲ. ಇದು ಕಿಟ್ಟೀ ಮನೆ. ಅವರಿಗಿದು ನಮ್ಮನೆ ಅಂತ ಗೊತ್ತಿಲ್ಲ. ಈ ವೆಂಕಟಲಕ್ಷ್ಮಿ, ಕಿಟ್ಟಿ ಸೋದರತ್ತೆ ಮಗ್ಳು. ಅವ್ರು ಪೂರ್ವ ಕಾಲದವರು, ನಮ್ಮೀನಾನ ಒಪ್ದೆ ಹೋದ್ರೂ ಇವಳ್ನ ಒಪ್ತಾರು ಅಂತ ಕರ್ಕೊಂಡ್ಬಂದಿದಾನೆ. (ಹೊರಗೆ ಮಾತಿನ ಶಬ್ದ) ಆಗೋ ಬಂದ್ರು. ಬನ್ನಿ. ಬನ್ನಿ. (ಪತಿಯನ್ನು ಕರೆದೊಯ್ಯುವಳು)

ಕಿಟ್ಟಿ :—(ಪ್ರವೇಶಿಸಿ ತೆರೆಯಲ್ಲಿರುವವರಿಗೆ) ಬನ್ನಿ, ಬನ್ನಿ, ದಯಮಾಡಿ. (ಜೋಯಿಸ, ಪಾರ್ವತಿ, ನಾರಣಪ್ಪ, ರಾಮು ಪ್ರವೇಶಿಸುವರು)

ರಾಮು :— ( aside to ಕಿಟ್ಟಿ) ಇದೇನೋ ನಿಮ್ಮನೇಗೇ....?

ಕಿಟ್ಟಿ :— ಷ್ ! ಸುಮ್ನಿರು. (ಇತರರಿಗೆ) ಕೂಡಿ. ಕೂಡಿ. ತಮ್ಮ ಸ್ವಾಗತಕ್ಕೆ ಇಂಥಾ ಸಮಯದಲ್ಲೂ ನಮ್ಮನೇಲಿ ನಾನೇ ಹಿರಿಯ ಕಿರಿಯ, ಗಂಡಸು ಹೆಂಗಸು ಎಲ್ಲಾ ಆಗ್ಬೇಕಾಗಿದೆ. ಓ ! ನಿಮ್ಮ ತಾಯಿ ಎಲ್ಲಿ ? ಮುಖ್ಯವಾದೋರೇ ಬರ್ಲಿಲ್ವೇ ! (ಬಾಗಿಲು ಸೇರಿ) ಓ ಹೊಹೋ ಪಡಸಾಲೆ ಪರೀಕ್ಷೆ ಆಗ್ತಾ ಇದೆ ! ಬನ್ನಿ ಬನ್ನಿ... ಹೀಗೆ ದಯಮಾಡಿಸ್ಬೇಕು, ಹೀಗೆ ದಯ ಮಾಡಿಸ್ಬೇಕು.

ಸುಬ್ಬಕ್ಕ :— (ಪ್ರವೇಶಿಸಿ) ಮನೇದು ಕಾಂಪೋಂಡು, ಪಡಸಾಲೆ ಎಲ್ಲಾ ಚೆನ್ನಾಗಿದೆ.

ಕಿಟ್ಟ :— ಮನೆ ಒಳಗೆಲ್ಲಾ ತೋರಿಸ್ತೇನಾಮೇಲೆ, ನೋಡ್ತೋರಂತೆ.

ಜೋಯಿಸ :— ಕೂಡಿಯಮ್ಮಾ, ಕೂಡಿ. (ಕುರ್ಚಿ ತೋರುವರು)

ಸುಬ್ಬಕ್ಕ :— ನಾನೇ? ಈ ಕುರ್ಚಿ ಮೇಲೇ? ನಂಗದೊಂದೇ ಬಾಕಿ. ನಮ್ಮ ಕುರ್ಚಿ ಇದ್ಯೆಲ್ಲಾ, ಶಾಶ್ವತವಾದ ಕುರ್ಚಿ (ನೆಲದ ಮೇಲೆ ಕೂಡಲು ಧೂಳು ಊದಲು)—

ಕಿಟ್ಟ :— ಛೆಛೆಛೆಛೆ, ನೆಲದ್ಮೇಲ್ಯಾಕ್ತೊಕ್ಕೊಳ್ಳೋದೇ, ತಾವು? ಒಂದ್ನಿಮಿಷ ತಡೀರಿ, ಬಂದ್ಬಿಟ್ಟೆ. (ಒಳಗಡೆ ಓಡಿ ಕೃಷ್ಣಾಜಿನ ತಂದು ಹಾಸಿ) ಹೂ, ಕೂಡಿ, ಈಗ, ಇದರ್ಮೇಲೆ. ಕಾರ್ನಲ್ಲಾಗಿರೋ ಚಕ್ಕಳದ seatಉ ವೈಲಿಗೆ. ಈ ಚಕ್ಕಳದ seatಉ ಮಡಿ. ಕೂಡಿ.

ಸುಬ್ಬಕ್ಕ :— (ರಾಮೂಗೆ) ನೋಡಿದ್ಯೇನೋ, ನೋಡಿದ್ಯೇನೋ, ನೋಡಿದ್ಯೇನೋ, ಲೋ ರಾಮೂ, ನೋಡಿದ್ಯೇನೋ ಇವ್ನ ಬುದ್ಧೀನ? ನೀನೂ ಇದ್ದೀಯೆ! ಬರೀ ಕ್ಯಾಟು, ವ್ಯಾಟು ಅಂದ್ಬಿಟ್ರೆ ಬರ್ಲಿಲ್ಲ ಭಾಗ್ಯ! (ನಾರಣಪ್ಪನಿಗೆ) ಏನೂಽಂದ್ರೇ?

ನಾರ :— ಅಷ್ಟಲ್ದೆ! ಹುಡುಗ ತುಂಬಾ ಜಾಣನ್ನಾಗಿದಾನೆ.

ಸುಬ್ಬಕ್ಕ :— ಅಲ್ವೇ! ಕ್ರಾಪು ಗೀಪು ತೆಗ್ಕೊಂಡಿದ್ರೂ ಮಡಿ ಆಚಾರ ತಿಳ್ಕೊಂಡಿದ್ದಾನೆ. ಏನೋ ಎಲ್ಲಿ ಹುಡುಗಿ? ನಿಮ್ಮ ಸೋದರ್ಮಾವನ್ಮಗ್ಳು ಅಂದಿ ಅಲ್ಲ?

ಕಿಟ್ಟ :— ಹೂ.... ಅವ್ಳು ಒಳಗಿದಾಳೆ. ಹಾಗೆಲ್ಲಾ ಹೊರಗೆ ಬರೋಲ್ಲ. ತುಂಬಾ ನಾಚಿಕೆ. ಬಂದೆ ಒಂದ್ನಿಮಿಷ. (ಒಳಗೆ ಹೋಗುವನು)

ಸುಬ್ಬಕ್ಕ :— (ಅಳಿಯನಿಗೆ) ಏನೂ, ನೋಡಿದ್ರಾ ಹುಡುಗನ್ನ? ಹ್ಯಾಗಿದಾನೇ!

ನಾರ :— ಅಲ್ವೇ! ಗುಣಾ! ಇವನ್ನೋಡಿದ್ರೆ ಆ ಹುಡ್ಗೀನೀಗ್ಲೇ ಒಪ್ಕೊಂಡ್ಬಿಡ್ಬೇಕೂ ಅನ್ನಿಸ್ತಾ ಇದೆ.

ಜೋಯಿಸ :— ನೀವು ಒಪ್ಪೀರಿ ಅಂತ ನನಗೆ ನಂಬ್ಕೇನೂ ಇದೆ. ಅವಳ ಜಾತಕಾನೂ ನಮ್ಮ ರಾಮೂ ಜಾತ್ಕಕ್ಕೆ ತುಂಬಾ ಚೆನ್ನಾಗ್ಕೂಡತ್ತೆ.

5

**ಸುಬ್ಬಕ್ಕ** :— ಓಹೋ, ನೋಡಿದೀರೇನೂ ನೀವೂ ?

**ಜೋಯಿಸ** :— ನೋಡ್ದೆ ಹೇಳ್ತೀನ್ಯೇ ? (ಕಿಟ್ಟಿ, ವೆಂಕಟಲಕ್ಷ್ಮೀನಿ ಕರೆತರಲು) ಆಗೋ !

**ಕಿಟ್ಟಿ** :— ಬಾಮ್ಮ. ಬಾ. (ವೆಂಕ. ತಲೆ ತಗ್ಗಿಸಿನೆಲ ನೋಡುತ್ತಿರಲು) ಬಾ, ಪರವಾಗಿಲ್ಲ.

**ಸುಬ್ಬಕ್ಕ** :— ಆಹಾಹಾಹಾಹಾಹಾ ಏನ್ ಮುದ್ದೂ !

**ನಾರ** :— ಭೇಷ್ ಭೇಷ್ ಭೇಷ್ ಭೇಷ್ ಭೇಷ್ ! !

**ರಾಮು** :— ಕಿಟ್ಟೀ, ನೀನ್ ನೀನ್ ನೀನ್....

**ಕಿಟ್ಟಿ** :— ಕೂತ್ಕೊಳ್ಳೋ ಸುಮ್ನೆ ! (ರಾಮು ತೆಪ್ಪನೆ ಕೂಡುವನು) ಹೋಗಮ್ಮಾ, ದೊಡ್ಡವ್ರಿಗೆ ನಮಸ್ಕಾರ ಮಾಡಮ್ಮ.

(ವೆಂಕ. ತಗ್ಗಿಸಿದ ತಲೆಯಿಂದಲೇ ಕಣ್ಣು ಹೊರಳಿಸಿ ಎಲ್ಲರನ್ನೂ ನೋಡಿ ನೇರವಾಗಿ ಸುಬ್ಬಕ್ಕನನ್ನು ಸಮೀಪಿಸಿ ನಮಸ್ಕರಿಸಲು)

**ಸುಬ್ಬಕ್ಕ** :— ಆಯ್ಯೋ, ಆಯ್ಯೋ, ಆಯ್ಯೋ ! ಎಂಥ, ಎಂಥಾ ಜಾಣೇನೇ ! ಎಂಥಾ ಬುದ್ಧಿವಂತಳೇ ! ! ಏಳಮ್ಮಾ, ಏಳೂ, ಏಳು. ಬೇಗ ಮದ್ವೆ ಮಾಡ್ಕೊಂಡೂ, ಸಾವಿರ ವರ್ಷ ಸಂತೋಷ್ವಾಗಿ ಸಂಸಾರ ಮಾಡ್ಕೊಂಡಿರಮ್ಮಾ, ಬಂಗಾರೂ ! ಹೋಗು (ನಾರಣಪ್ಪನ್ನ ಸೂಚಿಸುತ್ತಾ) ಆವರು ನಿಮ್ಮಾವ, ನಮಸ್ಕಾರ ಮಾಡ್ಹೋಗು ಆವರ್ಗೂ ನೂ. (ವೆಂಕಟಲಕ್ಷ್ಮಿ ಹಾಗೆಯೇ ಮಾಡಲು) ನೋಡಿದ್ರಾ ಸೊಸೇನ ? ಚೂಟಿ ! ಚೂಟಿ ! !

**ನಾರ** :— ಚೂಟಿ ! ಚೂಟಿ ! ಏಳಮ್ಮಾ, ಏಳು ! ಚೂಟೀ ಚೂಟಿ !

**ಜೋಯಿಸ** :— (ಪಾರ್ವತಮ್ಮನನ್ನು ತೋರುತ್ತಾ) ಆವರ್ಗೂ ನಮಸ್ಕಾರ ಮಾಡೂ, ನಿಮ್ಮತ್ತೇ. (ವೆಂಕ. ಹಾಗೆಯೇ ಮಾಡುವಳು. ಪಾರ್ವತಿ ಮೋರೆ ವಕ್ರ ಮಾಡುವಳು)

**ಸುಬ್ಬಕ್ಕ** :— ಆಯ್ತಾ ? ಇಲ್ಬಾ, ಇಲ್ಬಾ ಈಗ. ಕೂತ್ಕೊ....ಹೂ...ಹಾಗೇ.... ಸೀರೆ....ಕುತ್ತಾಲದ್ದು ಅಂತ್ಕಾಣತ್ತೆ.

ಕಿಟ್ಟಿ :— ಹೌದು, ಹೌದು. ಅವರೂರೊಳ್ಗೆಲ್ಲಾ ಇಂಥಾದ್ದೇ ಉಡೋದು. ನಿಮಗೆ ತುಂಬಾ ಹಳೇ ಕಾಲದ ತರಹ ತೋರಬಹುದು.

ಸುಬ್ಬಕ್ಕ :— ಇಲ್ಲ ಇಲ್ಲ. ನಮಗಿಂಥಾದ್ದೇ ಬೇಕು. ಏನೇ, ಪಾತು, ಆಗ ಉಟ್ಕೊಂಡ್ಬಂದಿತ್ತಲ್ಲ, ಅದು, ಆದಕ್ಕೂ ಇದಕ್ಕೂ ನೋಡಿದ್ಯೇನೇ ?

ಕಿಟ್ಟಿ :— ಆ ?

ಸುಬ್ಬಕ್ಕ :— ನೀ ಬರೋಕೆ ಅರ್ಧ ಗಂಟೆ ಮುಂಚೆ ಇನ್ನೊಂದ್ಹೆಣ್ಣು ನಮ್ಮನೇಗ್ಬಂದಿತ್ತು. ಅದು ಸುತ್ಕೊಂಡಿತ್ತು ಒಂದ್ಸೀರೆ........ ಓಹೊಹೊ ಹೋಹೊ ಕಾಮನ ಬಿಲ್ಲು ! ಕಣ್ಣು ಕೋರೈಸೋ ಹಾಗಿರೋದು ಬಣ್ಣ !

ಜೋಯಿಸ :— ಆ ಹುಡಿಗೀಗೂ ಇವಳ್ಗೂ ಯಾಕ್ಹೋಲಿಸ್ತೀರಿ ? ಅವಳ್ಗೂ ಇವಳ್ಗೂ ಸಂಬಂಧವೇ ಇಲ್ಲ.

ಸುಬ್ಬಕ್ಕ :— ಎಲ್ಬರ್ಬೇಕೂ ? ನಂಗೇನ್ ಕಣ್ಕಾಣೋಲ್ವೇ ? (ಅಳಿಯನಿಗೆ) ಏನೂಽಂದ್ರೇ ?

ನಾರ :— ಕಾಣಿಸ್ದೆ !

ಸುಬ್ಬಕ್ಕ :— ಆದೆ.... ಎಲ್ಲೇ, ನಿನ್ಹೆಸ್ರೇನ್ಹೇಳು. (ಅಕ್ಕ ಪಕ್ಕ ನೋಡಿ) ಸಧ್ಯಕ್ಕೆ ನಿಮ್ಮಮ್ಮ ಒಬ್ಬಿಲ್ಲ ಇಲ್ಲಿ ಅಡ್ಡ ಬಾಯ್ಹಾಕೋಕೆ.

ವೆಂಕ :--- ವೆಂಕಟಲಕ್ಷ್ಮಿ.

ಸುಬ್ಬಕ್ಕ :— ಆ ? ಸ್ವಲ್ಪ ಗಟ್ಟಿಯಾಗ್ಹೇಳು.(ನಾರಣಪ್ಪನಿಗೆ) ನೋಡಿದ್ರಾ, ಧನಿ ಕೂಡ ಎತ್ತರಿಸೋಲ್ಲ, ನಾಚ್ಕೇ !

ನಾರ :— ಜಾಣೆ, ಜಾಣೆ. ಗಂಭೀರೇ !

ಸುಬ್ಬಕ್ಕ :--- ಹೂ........ ಹೇಳಮ್ಮ. ಸ್ವಲ್ಪ ಗಟ್ಟಿಯಾಗ್ಹೇಳು. ನಾನಿದೇನೆ.

ವೆಂಕ :--- ವೆಂಕಟಲಕ್ಷ್ಮಿ.

ಸುಬ್ಬಕ್ಕ :— ಆ ? ವೆಂಕಟಲಕ್ಷ್ಮಿ ? **ವೆಂಕಟಲಕ್ಷ್ಮಿ ?**

ವೆಂಕ :--- ಹೂ.

ಸುಬ್ಬಕ್ಕ :--- (ಕಿಟ್ಟೀಗೆ) ಏನೋ ?

ಕಿಟ್ಟಿ :--- ಹೌದು.

ಸುಬ್ಬಕ್ಕ :--- (ಜೋಯಿಸರಿಗೆ) ಹೌದೇ ?

ಜೋಯಿಸ :— ಅಲ್ವೇ ?

ಸುಬ್ಬಕ್ಕ :--- ಅದೇ ನಾ ಕೇಳಿದ್ದು. ವೆಂಕಟಲಕ್ಷ್ಮಿ! ಬದುಕ್ದೇ! ಮೀನಾ, ಮೊಸಳೇ, ತಿಮಿಂಗಿಲಾ ಯಾವ್ದೂ ಇಲ್ವಲ್ಲಾ, ಬದುಕ್ದೇ!! (ಕಿಟ್ಟೀಗೆ) ಏನಪ್ಪಾ, ನಮ್ಮನೇಗ್ಹೆಣ್ಣು ಬಂದಿತ್ತು ಅಂತ್ಹೇಳಿದ್ನಲ್ಲಾ, ಅದರ ಹೆಸರು, ಮೀನಾ ಅಂತೆ ಮೀನ!!!

ಕಿಟ್ಟಿ :--- ಮೀನಾ ? ಎಂಥಾ ಮೀನದು ? ಅಸಹ್ಯ! ನೀರಲ್ಲಿರತ್ತಲ್ಲ ಅದೇ ?

ಸುಬ್ಬಕ್ಕ :--- ಹೂ ಹೂ ಹೂ, ನೀರ್ಬಿಟ್ಟು ಭೂಮೀಗೆ ಬಂದ್ಬಿಟ್ಟಿತ್ತು. (ವೆಂಕ.ಗೆ) ಎಲ್ಲವ್ಮಾ, ಇನ್ನೊಂದ್ಸರ್ತಿ ಹೇಳು ನಿನ್ಹೆಸ್ರು, ಕೇಳೋಣ.

ವೆಂಕ :--- ವೆಂಕಟಲಕ್ಷ್ಮಿ.

ಸುಬ್ಬಕ್ಕ :--- ಅಹಹಹಹ....ಅಮೃತ ಕಿವೀಲಿ ಹುಯ್ತಾ ಇದ್ಹಾಗಿದೆ. ಎಲ್ಲವ್ಮಾ, ಇನ್ನೊಂದ್ಸರ್ತಿ, ಕಡೇಸರ್ತಿ ಹೇಳ್ಬಿಡು.

ವೆಂಕ :--- ವೆಂಕಟಲಕ್ಷ್ಮಿ.

ಸುಬ್ಬಕ್ಕ :--- ಸಾಕು ಸಾಕು ಸಾಕು. ಸಾಕವ್ಮಾರಾಯಾ ಸಾಕು.... ಕಸ ಮುಸರೆ ಎಲ್ಲಾ ಹೇಳ್ಕೊಟ್ಟೀ ಇರ್ಬೇಕ್ನಿಂಗೆ ?

ಕಿಟ್ಟಿ :--- ನೀವಾ ವಿಷಯದಲ್ಲೇನೂ ಸಂದೇಹ ಇಟ್ಕೋಬೇಕಾದ್ದೇ ಇಲ್ಲ. ಒಂದು ಮುಸುರೆ ತೊಳೀತಾಳೆ. ಹುಣಿಸೆಹಣ್ಣುಚ್ಚಿ ಗಲಬರ್ಸಿ ತಪ್ಲೇನ ಆಕಡೆ ಬೋರ್ಲ್ಹಾಕಿದ್ರು ಅಂದ್ರೆ, ನಿಮ್ಮನೇಗೆ ಕನಡಿ ಯಾಕೆ ಮುಖ ನೋಡ್ಕೊಳ್ಳೋಕೆ ? ಆ ತಪ್ಲೇನೇ ಎತ್ತಿ, ಹಾಗೇ ಹಿಡ್ಕೊಂಡ್ರೆ ಸರಿ ಮುಖದ ಮುಂದೆ, ಫಳಫಳಾ ಅಂತ ಹೊಳೀಬೇಡ್ವೇ ಪ್ರತಿಬಿಂಬ! ಇನ್ ಕಸವೋ!! ಬಳದ್ಲೂ ಅಂದ್ರೇ, ಊಟದೆಲೇನೇ ಇಲ್ದೆ ನಡೆಸಭೋದು, ಭೂರಿ ಭೋಜನಾನ, ನೆಲದ್ಮೇಲೆ!

ನಾರ :--- ಭೇಷ್ ಭೇಷ್ ಭೇಷ್ !

ಸುಬ್ಬಕ್ಕ :--- ನೋಡಿದ್ರಾ ಹ್ಯಾಗಿದಾಳೆ! ಭೋಜನ ಅನ್ನೋತ್ಲೂ ಜ್ಞಾಪ್ಕ ಬಂತು. ಅಡ್ಗೇನೂ ಬರ್ಲೇಬಹುದು ? ಬರತ್ತೇಂತ್ಗೊತ್ತು. ಸುಮ್ನೆ ಕೇಳ್ತೀನಿ.

ವೆಂಕ :— ಬರತ್ತೆ.

ಕಿಟ್ಟಿ :— ಬರ್ದ್ದಿ ಉಂಟೆ ? ನಿಮಗೇನಡಿಗೆ ಬೇಕು ? ಈ ನಳಪಾಕ ಶಾಸ್ತ್ರ ಇದೆಯಲ್ಲಾ....

ಸುಬ್ಬಕ್ಕ :— ಹು, ಹೂ, ಸರಿ, ನಂಗೊತ್ತಿಲ್ವೇ, ನಳ....ಅದೇ ನಮ್ಮ ದಮಯಂತಿ ಗಂಡ........

ಕಿಟ್ಟಿ :— ಅನ್ನೇ, ಅನ್ನೇ. ಅವನ್ಬರೆದಿದ್ದು ಪಾಕಶಾಸ್ತ್ರ.... ಅದೂ....

ಸುಬ್ಬಕ್ಕ :--- ಹೂ, ಹೂ, ಹೇಳು....ಗೊತ್ತೂ,

ಕಿಟ್ಟಿ :--- ಕರತಲಾಮಲಕ.

ಸುಬ್ಬಕ್ಕ :--- }<br>ನಾರ :--- } ಓಹೊಹೊಹೊಹೊ ! !

ಕಿಟ್ಟಿ :— ವಾಂಗೀಭಾತು, ಕೇಸರಿಭಾತು, ಜಿಲೇಬಿ....

ಸುಬ್ಬಕ್ಕ :--- ಅಯ್ಯೊಯ್ಯೊಯ್ಯೊಯ್ಯೊ ಅಷ್ಟೆಲ್ಲಾ....? !

ಕಿಟ್ಟಿ :— ಹೂ. ಆದ್ರೆ ಎಲ್ಲಾದಕ್ಕಿಂತ, ಇವಳ speciality, ಈ ಮೆಂತ್ಯದ್ಗೊಜ್ಜಿದೆಯಲ್ಲ....

ಸುಬ್ಬಕ್ಕ :--- **ಮೆಂತ್ಯದ್ಗೊಜ್ಜು ? ! !**

ಕಿಟ್ಟಿ :— ಹೂ. ಅದು ಇವ್ಳು ಮಾಡ್ಬೇಕು, ನಾವು ತಿನ್ಬೇಕು. ಈಗ್ಕೂಡ ಮಾಡಿದಾಳೋ ಏನೋ, ಹೇಳಿದ್ದೆ. ಏನೇ ?

ವೆಂಕ :--- ಮಾಡಿದೇನೆ.

ಕಿಟ್ಟಿ :— ಏನುಪಯೋಗ ? ಪಾಪ, ಅವರು ರುಚಿ ನೋಡೋ ಹಾಗಿಲ್ಲ. ಮದ್ವೇಗೆ ಮುಂಚೆ ನಮ್ಮನೇಲಿ ಅವರು ಊಟ ಮಾಡೋ ಹಾಗಿಲ್ಲ.

ಸುಬ್ಬಕ್ಕ :— ಆದ್ಬೇರೆ ತಿಳ್ಕೊಂಡಿದ್ದೀಯೋನೋ ಶಾಸ್ತ್ರನಾ ? (ನಾರಣಪ್ಪನಿಗೆ) ಏನೂಂದ್ರೆ ಹುಡುಗ ?

ನಾರ :— ಅಸಾಧ್ಯ, ಅಸಾಧ್ಯ !

ಸುಬ್ಬಕ್ಕ :— ಮೆಂತ್ಯದ್ಗೊಜ್ಜು ನನ್ನ ಪ್ರಾಣಾಕಾಣೇ, ಬಂಗಾರೂ. ಬಾಯಿಲಿ ನೀರೂರ್ತಾ ಇದೇ, ಏನ್ಮಾಡ್ಲೀ ? ಆಗ್ಲಿ, ಮದ್ವೆ ಆಗ್ಲೀ........ ಬಿಡ್ತೀನ್ಯೇ ! ನನಗೇನೋ.... ಎಲ್ಲಿ, ಬೈತಲೆ ಮಧ್ಯಕ್ಕೇ ಇದೆ ! ನೋಡಿದ್ಯೇನೇ, ಪಾತೂ ? "ಹಾಗೇ ತೆಗ್ಕೊಳ್ಳೀದು ಈಗೆಲ್ಲಾ" ಅಂದ್ಯೆಲ್ಲಾ, ಈಗ್ನೋಡೇ ಇಲ್ಲಿ. ಅರಿಶಿನ, ಕುಂಕುಮ, ಪುಚ್ಚ ಪುಚ್ಚ ಪುಚ್ಚ....ಒಪ್ದೆ ಕಾಣೇ ಒಪ್ದೆ....ಇನ್ನೇನೂ....ಆ....ಅಂದ್ಹಾಗೇ, ಆ ಇವ್ನು, ನಿನ್ನ ಗಂಡ, ನಟುವ್ರೀನ್ಹಾಗೆ ಸದಾ ಸಂಗೀತ ಸಂಗೀತ ಅಂತಿರ್ತಾನೆ. ನಿಂಗೆ ಹಾಡ್ಗೀಡ್ಹೇಳೋಕ್ಬರತ್ತೇನು ?

ವೆಂಕ :— ಬರತ್ತೆ.

ಸುಬ್ಬಕ್ಕ :—ನಿಂಗೆ ಬರ್ದೆ ಇರೋದ್ಯಾವ್ದು ಅಂತೀನಿ ! ಎಲ್ಲಾ ಬರತ್ತೇ !

ಕಿಟ್ಟಿ :— ಆದ್ರೆ ಅವಳ ಹಾಡು ನಿಮಗ್ಹಿಡಿಸ್ಲಾರ್ದು. ಎಲ್ಲಾ ಪೂರ್ವ ಕಾಲದ ದೇವರನಾಮಗಳು.

ಸುಬ್ಬಕ್ಕ :— ದೇವರ ನಾಮಗಳೂ ? ನಮಗೆ ಬೇಕಾದ್ದೂ ಅವೇ. ಅವ್ನಿಗ್ಬೇಕಾದ್ರೆ ರೂಂನಲ್ಲಿ ಕೂಡಿಸ್ಕೊಂಡ್ಹೇಳ್ಕೊಡ್ಲಿ ಸಿನೀಮಾ ಹಾಡುಗ್ಳು. ಎಲ್ಲಿ ಹೇಳು.........ತಡಿ, ನೀನು ಬಾಯಿಲಿ ತಾನೇ ಹೇಳೋದು ?

ವೆಂಕ :— ಏನೂ ?

ಸುಬ್ಬಕ್ಕ :— ಆಗ ಬಂದಿತ್ತು ಅಂದ್ನಲ್ಲ, ನಮ್ಮನೇಗೆ, ಕೋಗಿಲೆ, ಅದಕ್ಕೆ ತಂಬೂರಿ ಇಲ್ದೆ ಹೋದ್ರೆ ಇಂಚರ ಹೊರಡೋದೇ ಕಷ್ಟವಂತೆ.

ವೆಂಕ :— ಅಯ್ಯೋ, ನಮಗ್ಯಾಕಮ್ಮ ತಾಳ ತಂಬೂರಿ ? ನಮ್ಮಷ್ಟಿಗ್ನಾವು ಗೌರಿ ಪೂಜೆ, ತುಳಸಿ ಪೂಜೆ ಮಾಡ್ಕೊಳ್ಳೋಕೆ ಶ್ರದ್ಧೆ ಒಂದಿದ್ರೆ ಸಾಕು.

**ಸುಬ್ಬಕ್ಕ** :— (ನಾರಣಪ್ಪನಿಗೆ) **ಅಯ್ಯಯ್ಯೋ, ಕೇಳಿದ್ರಾ?** (ವೆಂಕ.ಗೆ) ಹೌದಮ್ಮ, ಹೌದೇ, ಹೌದೂ. ಶ್ರದ್ಧೆಯೇ ತಂಬೂರಿ. ಭಕ್ತಿಯೇ ತಾಳ. ಹೇಳು. ಯಾವ್ದೇಳ್ತೀ?

(ವೆಂಕ., ಕಿಟ್ಟಿಯನ್ನು ನೋಡುವಳು)

**ಕಿಟ್ಟಿ** :— ಯಾವ್ದು ಬೇಕಾದ್ರೂ ಹೇಳು.

**ವೆಂಕ** :— "ಭಾಗ್ಯಾದ ಲಕ್ಷ್ಮೀ ಬಾರಮ್ಮ | ನಮ್ಮಮ್ಮನೀ |
ಭಾಗ್ಯಾದ ಲಕ್ಷ್ಮೀ ಬಾರಮ್ಮ ||
ಹೆಜ್ಜೆಯ ಮೇಲೊಂದ್ಹೆಜ್ಜೆಯನಿಕ್ಕುತ |
ಗೆಜ್ಜೆಯ ಕಾಲು ಘಲುಘಲು ಎನ್ನುತ |
ಸಜ್ಜನ ಸಾಧೂ ಪೂಜೆಯ ವೇಳೆಗೆ |
(ಮುಂದೆ ಹಾಡು ಮರೆತು ಜ್ಞಾಪಿಸಿಕೊಳ್ಳುವಂತೆ)
ಸಜ್ಜನ ಸಾಧೂ ಪೂಜೆಯ ವೇಳೆಗೆ....?
---ಸಜ್ಜನ ಸಾಧೂ ಪೂಜೆಯ ವೇಳೆಗೆ....?....

**ಸುಬ್ಬಕ್ಕ** :— ಗಾಬರಿ, ಗಾಬರಿ, ಮರೆತ್ಬಿಟ್ಯೇನೇ? **"ಮಜ್ಜಿಗೆ ಒಳಗಿನ ಬೆಣ್ಣೆಯಂದದಿ"**–

(ಉಳಿದದ್ದು ವೆಂಕ., ಸುಬ್ಬಕ್ಕ ಈರ್ವರೂ ಪೂರ್ತಿ ಮಾಡು)

ಬಾಮ್ಮ, ಬಾಮ್ಮಾ, ಭಾಗ್ಯಾದಾಲಕ್ಷ್ಮೀ ಬಾರಮ್ಮಾ (ಆಲಂಗಿಸಿಕೊಂಡು) **ಒಪ್ದೆ ಒಪ್ದೆ ಒಪ್ದೆ. ಭಾಗ್ಯಲಕ್ಷ್ಮೀ, ಒಪ್ಪಿದ್ನೇ**– ನಿನ್ನ....ಮನಸ್ಪೂರ್ತಿ!

**ನಾರ** :— ನಾನೂ ಅಷ್ಟೆ.

**ಸುಬ್ಬಕ್ಕ** :— ಲಾ, ರಾಮೂ, ಏನೋ?

**ಕಿಟ್ಟಿ** :— ಏನೋ?

**ರಾಮು** :— (ಎದ್ದು) ಏನೇನೋ ಅಂದ್ಬಿಟ್ಟು, ಹಾಸ್ಯ ಮಾಡೋಕೆ ಕರ್ಕೊಂಡ್ಬಂದ್ಯೇನೋ ಇಲ್ಲಿ?

**ಕಿಟ್ಟಿ** :—ಕೂತ್ಕೊಳ್ಳೋ! ಹಾಸ್ಯ ಮಾಡೋಕೇ ಕರ್ಕೊಂಡ್ಬಂದಿದ್ದು!

ನಾರ :— (ರಾಮೂಗೆ) ಯಾಕೋ ಹಾಸ್ಯ ?

ಕಿಟ್ಟ :— ಅವನಿಗೆ ಇವ್ಳೊಪ್ಲಿಲ್ಲ, ಹಾಸ್ಯವಾಗಿ ಕಂಡಿತು. (ಪಾರ್ವತಮ್ಮನಿಗೆ) ಅತ್ತೆಯಾಗೋರು, ತಾವು....?

ಪಾರ್ವತಿ :— ನನ್ಮಾತಿಗೆ ಬೆಲೆ ಕೊಡೋದಷ್ಟ್ರಲ್ಲೇ ಇದೆ. ಏನ್ಬೇಕಾದ್ರೂ ಮಾಡ್ಕೊಳ್ಳಿ.

ಸುಬ್ಬಕ್ಕ :— ಏನೂ? ನಿನಗೂ ಒಪ್ಗೆ ಇಲ್ಲ ಅನ್ನು ಹಾಗಾದ್ರೆ? ಹ್ಯಾಗೊಪ್ಪೀಯೇ? ನಿನ್ಗೂ ಅವನ್ಗೂ ಆ ಅರಗಿಣಿ ಮಾಯ ಮಾಡ್ಬಿಟ್ಟ ದಾಳೆ. (ವೆಂಕ.ಕಣ್ಣೊರಸಿಕೊಳ್ಳಲು) ಅಯ್ಯೋ, ಇಲ್ನೋಡಿ. ಬೇಡ ಅನ್ನೋತ್ಲೊ ಕಣ್ಣಲ್ಲಿ ನೀರು? ಅಳ್ಬೇಡ, ವೆಂಕಟಲಕ್ಷ್ಮೀ....

ಕಿಟ್ಟ :— ಹೋಗ್ಲಿ ಬಿಡಿ. ಹುಡುಗ, ಹುಡುಗನ ತಾಯಿ ಇಬ್ರೂ ಆಗ ನಿಮ್ಮನೇಗೆ ಬಂದ ಹುಡುಗೀನ ಒಪ್ಪಿದ್ದ್ರು. ಇವಳ್ನ ಒಪ್ಲಿಲ್ಲ. ನೀವು ಆ ಹುಡ್ಗೀನ ಒಪ್ಲಿಲ್ಲ, ಇವಳ್ನ....

ನಾರ :—
ಸುಬ್ಬಕ್ಕ :— } **ಒಪ್ಪಿದ್ವೂ, ಒಪ್ಪಿದ್ವೂ, ಒಪ್ಪಿದ್ವೂ, ಮನಸ್ಪೂರ್ತಿ ಒಪ್ಪಿದ್ವೂ.**

ಕಿಟ್ಟ :— ಸಂತೋಷ. ವೆಂಕಟಲಕ್ಷ್ಮೀ ಗೆದ್ಲು. (ಒಳಬಾಗಿಲು ಕಡೆ ನೋಡುತ್ತಾ) **ಅಪ್ಪಾ! ಅಮ್ಮಾ! ಬನ್ನಿ ಮಹಾಮಂಗಳಾರತೀಗೆ!**

(ವಿ.ರಾ. ಕಮಲು ಪ್ರವೇಶಿಸುವರು)

ವಿ. ರಾ :— (ನಾರಣಪ್ಪನ ಕಡೆ ನುಗ್ಗುತ್ತಾ) **ಏನ್ರೀ ನೀವು ಒಪ್ಪಿದ್ದೂ?**

ನಾರ :—
ಪಾರ್ವತಿ :—
ಸುಬ್ಬಕ್ಕ :— } (ಎದ್ದು ನಿಂತು ಆಶ್ಚರ್ಯದಿಂದ ಬಾಯಿಬಿಟ್ಟು ನೆಟ್ಟ ದೃಷ್ಟಿಯಿಂದ)

ನೀವು? ಇಲ್ಲಿ? ಇದೇನು?

ವಿ. ರಾ :— (ನಾರಣಪ್ಪನಿಗೆ) ಯಾಕ್ರೀ, ಹೀಗ್ನೋಡ್ತೀರಿ? ಹ್ಯಾಗ್ರೀ ಮನಸ್ಪೂರ್ತಿ ಒಪ್ಪಿದ್ರಿ?

ಕಿಟ್ಟಿ :— ತಡಿಯಪ್ಪ, ನಾ ಮಾತಾಡ್ತೀನಿ. (ನಾರಣಪ್ಪ, ಸುಬ್ಬಕ್ಕ, ರಾಮು, ಪಾರ್ವತಿಗೆ) ನೀವು ಇವಳ್ನ ಯಾರು ಅಂತ ತಿಳ್ಕೊಂಡಿದೀರಿ?

ಸುಬ್ಬಕ್ಕ :— ಆ?.... ನಿಮ್ಮ.... ನಿಮ್ಮ.... ಸೋದರಮಾವನ ಮಗಳು ಅಂದ್ಕೊಂಡಿದ್ದೀ!

ಕಿಟ್ಟಿ :— ಸೋದರಮಾವನ ಮಗಳೂ ಅಲ್ಲ, ಸೋದರ ಸೊಸೇ ಮುತ್ತಜ್ಜಿಯೂ ಅಲ್ಲ. ಕೇಳಿ. ಇವ್ರು, ನಮ್ಮ ತಂದೆ, ಇವ್ರು ತಾಯಿ, ಇವ್ಳು, ಯಾರನ್ನ ನೀವು ನಿಮ್ಮನೇಗೆ ಬಂದಾಗ "ಚಿಟ್ಟೆಹುಳು", "ಪಂಚರಂಗಿ", "English ಸರಸ್ವತಿ", "ವಿಲಾಯ್ತೀಗ್ಹೋಗ್ತಾಳೇನೋ ಬಣ್ಣದ ಬೊಂಬೆ" ಅಂತ ಅಂದ್ರೋ ಅವ್ಳೇ ಇವ್ಳು, ನನ್ನ ತಂಗಿ, ಮೀನ, **ಬಾ, ಮೀನಾ, ಇತ್ಲಾಗೆ!**

(ವೇಷಕ-ಮೀನ, ಕಿಟ್ಟಿ ಪಕ್ಕಕ್ಕೆ ಹೋಗಿ ನಿಲ್ಲುವಳು)

ಸುಬ್ಬಕ್ಕ :— ಮೀನಾ?!

ನಾರ :— ಅವ್ಳೆ?!!

ಪಾರ್ವತಿ :—
ರಾಮು :— } ಆ?!!!

ಕಿಟ್ಟಿ :—ಊ. ಯಾರು ನಿಮ್ಮನೇಗೆ ಸೊಸೆಯಾಗಿ ಬರ್ತಿದ್ಳೋ, ಯಾರು ನಿಮ್ಮ ಕೈಕಾಲಿನ ಉಸಿರಡಗಿ ನೀವ್ಮಲೇಲ್ಕೊಂತಾಗ ನಿಮಗೆ ಶುಶ್ರೂಷೆ ಮಾಡ್ತಿದ್ಳೋ, ಯಾರು ನಿಮ್ಮನೇಗೆ ಮುಂದೆ ಯಜಮಾನಿಯಾಗ್ತಿದ್ಳೋ, ಯಾರು ನಿಮ್ಮ ವಂಶಾನ ಬೆಳೆಸಿ ನಿಮ್ಮನ್ನ ಉದ್ಧಾರ ಮಾಡ್ತಿದ್ಳೋ, ಅವ್ಳೇ ಇವ್ಳು! ಇನ್ನು ನೀವು! ಇದೊಂದನ್ನೂ ತಿಳ್ಕೊಳ್ಳಿ, "ಬಂಗಾರದ್ದೇನೋ ಬಳೆ?", "ಕೈಯೂ ಬಾಯೂ ಸೇರಿಸ್ಕೊಂಡ್ಸಂಗೀತ ಹೇಳ್ತಾಳೇನೋ", "ತಂಜಾವೂರಿಗ್ಹೋಗಿ ತಾಫೆ ಕಟ್ಟೋದನ್ನೂ ಕಲ್ತಿದ್ದಾಳು", "ಸೊಟ್ಟ

ಬೈತಲೆ ತೆಗ್ಕೊಳ್ಳೋಕೆ ನೀನೇ ಬ್ರಾಂಬ್ರೋಳೋ ಇಲ್ಲಾ, ಆಂ....ಊಂ....'' ಅಂತ ಮಾತು ಮುಂದ್ವರಿಸ್ಲಾರ್ದೆ ಅಣ್ಣಾವ್ರನ ಗುಡೀಗೆ ಹೊಕ್ಕ ಆಡಿನ ಹಾಗೆ ನಿಮ್ಮ ಮಧ್ಯೆ ಬಂದು ಸಿಕ್ಹಾಕ್ಕೊಂಡ ಈ ಒಂದು ಹೆಣ್ಣುಹುಡ್ಗೀನ ಗೋಳ್ಹೊಯ್ಕೊಂಡು ಕಣ್ಣಲ್ನೀರ್ತರ್ಸಿ, ಹೊಟ್ಟೆಉರಿಸಿ ಕಳ್ಸಿದ ಮನುಷ್ಯರು....ಉ ಹು.... ಮನುಷ್ಯರೇ ನೀವು? ಏನು ಅಂತ ನಾನು ಚಿಕ್ಕವನು, ಹೇಳ್ಬಾರ್ದು, ನೀವೇ ನಿರ್ಧರಿಸ್ಕೊಳ್ಳಿ....

ವಿ. ರಾ :—ಅದೇ ಹುಡ್ಗೀನ ಈಗ ಹ್ಯಾಗ್ರೀ " ಒಪ್ದೆ'' ಅಂದ್ರೀ?

ಕಿಟ್ಟಿ :—(ರಾಮೂಗೂ ಪಾರ್ವತಮ್ಮನಿಗೂ), ತಾವೂ...., ಈಗ ಅದೇ ಹುಡ್ಗೀನ ಅದ್ಹ್ಯಾಗ್ರೀ ಒಪ್ಕೋಲ್ಲ ಅಂದ್ರೀ? ಹ ಹ ಹ ಹ ...ರಾಮೂ, ಇಲ್ಲಿದ್ಯೋ ಹಾಸ್ಯ! ಈ ನಿಮ್ಮ ಕುರುಡ್ನಲ್ಲಿದ್ಯೋ ಹಾಸ್ಯ! ಈ ನಿಮ್ಮ ಅವಿವೇಕದಲ್ಲಿದೆಯೋ ಹಾಸ್ಯ! ಹೆಣ್ಣೊಂದಿದ್ರೆ, ಜಮುಖಾನವೂ ಸುತ್ತಬಹುದು, ಕುತ್ತಾಲದ್ನೀರೆಯೂ ಉಡಿಸಬಹುದು, ಸೊಟ್ಟ ಬೈತಲೆಯೂ ತೆಗೀಬಹುದು., ನೆಟ್ಟ ಬೈತಲೆಯೂ ಎಳೀಬಹುದೂ, ಲೋಲಾಕೂ ಹಾಕಬಹುದೂ ಚಳತುಂಬೂ ತಗುಲಿಸಬಹುದು, ಹಾಡೋಕ್ಬಂದ್ರೆ 'ಪರಾಕೇಲಸರಸ್ವತಿಯೂ' ಹಾಡಬಲ್ಲಳು, 'ಭಾಗ್ಯದ ಲಕ್ಷ್ಮೀನ್ನೂ' ಪಾಡಬಲ್ಲಳು ಅನ್ನೋದ್ಯಾರಿಗೂ ತಿಳೀದೇ ಹೋಯ್ತಲ್ಲ ಅಲ್ಲಿದೆ ಹಾಸ್ಯ. ನಿಮ್ಕೊಬ್ಬರ್ದೇ ತಪ್ಪಲ್ಲ. ಗಂಡ್ನೋರೆಲ್ಲಾ ನಿಮ್ಹಾಗೇ ಅನ್ನಿ. ವೀಣೆ ಹಿಡಿಯೋ ಹುಡಿಗ್ಯೋರ್ಗಿಂತ ಊದುಕೊಳವೇ ಹಿಡ್ಯೋ ಹೆಂಡ್ತಿಯೋರೆ ಜಾಸ್ತಿ ಅನ್ನೋದನ್ಮರ್ತು " ಸಂಗೀತ ಬರುತ್ಯೇ '' ಅಂತ್ಕೇಳೋದು; ಹಲ್ಲಲ್ಲಾಡ್ತಾ ಇರೋ ಮುದಿಕ್ಯೋರೂ ಬಚ್ಚೋಂಕಾ ಕಿತಾಬ್ ಕೈಲ್ಹಿಡ್ಕೊಂಡು 'ವೇ ಹೈ, ವೋ ಹೈ' ಅಂತ ಕಲೀತಾ ಇರೋವಾಗ ಮದ್ವೇಗ್ಮುಂಚೇನೇ ಹಿಂದೀ ಬರ್ದೆ ಇದ್ರೆ ಬೇಡ ಅನ್ನೋದೂ; English ಬೇಕು ಅನ್ನೋರು ಒಂದ್ವರ್ಷ ಕೂತ್ಕೊಂಡ್ರೆ ಬೇಕಾದ್ಹಾಗೆ ಮಾತಾಡಬಹುದೂ ಅನ್ನೋದೂ, ಇವೆಲ್ಲಾ ಯಾರ್ಗೂ ತೋರೋಲ್ಲ. ಈ ಹೊರಗಿನ ವೇಷ ಭೂಷಣ accomplishmentsಗೇ attention ಕೊಟ್ಟು ಆಗೋ ಮದ್ವೇಗೆ ಕಂಟಕಗಳಾಗ್ತಾರೆ. ಈಗಿಲ್ಲಿ ಪ್ರತ್ಯಕ್ಷವಾಗ್ಹೋಡಿದೀರಿ. ನನ್ನ ತಂಗಿ ಒಂದು ತಪ್ಪು ಮಾಡಿದ್ಲು. ಮಧ್ಯಾಹ್ನ ನಿಮ್ಮನೇಗೆ ಬಂದಿದ್ದಾಗ,

ನಿಮ್ಮ ಕಣ್ಣಿಗೆ ವೆಂಕಟಲಕ್ಷ್ಮಿ ಹಾಗೂ, ನಿಮ್ಮ ಕಣ್ಣಿಗೆ ಮೀನಾ ಹಾಗೂ ಕಂಡಿದ್ದಿದ್ರೆ, ಎಲ್ರೂ ಒಟ್ಟಿಗೆ ಒಪ್ಪಿ ಅಪ್ಪಿ ಕುಪ್ಪಳಿಸ್ಬಿಡ್ತಿದ್ರಿ. ನನ್ನ ತಂಗಿ, ಮಾಯ ಮಂತ್ರ ಕಲಿತ ರಾಕ್ಷಸಿ ಅಲ್ಲ. ಪಾಪ, ಮನುಷ್ಯಳೂ....

ನಾರ :— ಅಯ್ಯಾ, ಅಸಾಧ್ಯ ಹುಡುಗ್ನಯ್ಯ ನೀನು. (ವಿ.ರಾ.ಗೆ) ಸ್ವಾಮೀ, ನಾನು ತಮಗೆ ಭಿಕ್ಷದೋರ್ಗ್ಹೇಳೋ ಹಾಗೆ ಹೇಳ್ಕಳಿಸ್ಬಿಟ್ಟೆ. ಈಗ್ನಮ್ಮ ಅಪರಾಧ ಅರಿವಾಯ್ತು. ದಯವಿಟ್ಟು ಕ್ಷಮಿಸಿ ನಿಮ್ಹುಡುಗನ ಬುದ್ಧೀ........

ಕಿಟ್ಟಿ :— ಹಾ ಹಾ....! certificate ಬೇಡ. ನನಗ್ಬೇಕಾಗಿರೋದು ಲಗ್ನಪತ್ರಿಕೆ. ನಿಮ್ಮನ್ನ ಕರ್ಕೊಂಡ್ಬಂದಿದ್ದಕ್ಕೆ. ಕ್ಷಮಿಸೋದು, ಆಶೀರ್ವಾದಿಸೋದು ಏನೂ ಬೇಡ. ನಾನಾಗ್ಲೇ ಹೇಳಿದೆನಲ್ಲ. ಇಂಥಾ ಕುರುಡು ನಿಮ್ಗೊಬ್ಬರ್ಗೇ ಅಲ್ಲ ಅಂತ....

ನಾರ:— ಹೌದಪ್ಪಾ, ಆದ್ರೆ ಎಲ್ಲಾ ಹೆಣ್ಣುಗ್ಳಿಗೂ ನಿನ್ನಂಥ ಒಬ್ಬೊಬ್ಬಣ್ಣ ಇರೋಲ್ವಲ್ಲ! (ಅತ್ತೆಗೆ) ಏನ್ಹೇಳ್ತೀರಿ?

ಸುಬ್ಬಕ್ಕ :— ಏನ್ಹೇಳ್ಲೀ....?

ಕಿಟ್ಟಿ :— ತಮ್ಮ ತಪ್ಪೂ ಅಲ್ಲ. ತಮಗೆ ಜೀವದ್ಮೇಲೆ ಜುಗುಪ್ಸೆ ಹುಟ್ಟೋಹಾಗ್ಮಾಡ್ಬಿಮ್ಮನ್ನಿಟ್ಟರೋ ನಮ್ದೇ ತಪ್ಪು. ಹೋಗ್ಲಿ ಈಗ ಇಷ್ಟಾದ್ಮೇಲೆ ನಿಮ್ಮ ಅಭಿಪ್ರಾಯ ಏನು ಅನ್ನೋದನ್ನ ದಯವಿಟ್ಟು ತಿಳಿಸ್ಬಿಟ್ರೆ........

ಸುಬ್ಬಕ್ಕ :— ನಾನೇ? ತಿಳಿಸ್ತೇನೆ....ತಿಳಿಸ್ತೇನೆ. (ರಾಮೂನ ಸಮೀಪಿಸಿ) ರಾಮು ಜೋಕೆ! ಜೋಕೆ! ಜೋಕೆ! ನಿಂಗೊತ್ತಾಗೋಲ್ಲ! ಸುಮ್ನೆ ಅವರಿವರ ಮಾತ್ಕೇಳ್ಬೇಡ. ನನಗೆ ಸುಮ್ನೆ ವಯಸ್ಸಾಗಿಲ್ಲ. ನಾನ್ಹೇಳಿದ್ಹಾಗ್ಮಾಡು. ನಿಂಗೊಳ್ಳೇದಕ್ಕೇ ನಾನ್ಹೇಳೋದು. ನನ್ನ ಕಾಲ ಎಲ್ಲಾ ಆಗ್ಹೋಯ್ತು. ಮುಂದಕ್ಕೆ ಸಂತೋಷವಾಗಿ ಇರ್ಬೇಕಾದೋನು ನೀನು. ಈ ಮೀನಾನ್ನ ....ಸುಮ್ನೆ....ಒಪ್ಕೊ!

**ಜೋಯಿಸ :**— ಭೇಷ್! ರಾಯರೇ! ಆಯ್ತು ಮದ್ವೆ!! ನಾ ಏನ್ಹೇಳ್ದೆ ? (ಜನಿವಾರ ತೀಡಲು)

**ಸುಬ್ಬಕ್ಕ :**— ಇಲ್ನೋಡಿ, ಆ ಜನಿವಾರ ಆಮೇಲೆ, ಮದ್ವೆ ಊಟ ಜಾಸ್ತಿ ಆದಾಗ ತೀಡೋರಂತೆ! ಈಗ ಲಗ್ನ ಯಾವತ್ತು, ಹೇಳಿ?

**ಜೋಯಿಸ :**— ಅಯ್ಯೋ, ನನಗ್ಯಾಕಮ್ಮ ಅಧಿಕಪ್ರಸಂಗಿತನ? ನಾನೇನ್ ಕೊಡೋನೇ,.... ತೊಗೊಳ್ಳೋನೇ?

**ಸುಬ್ಬಕ್ಕ :**— ಆಯ್ತಲ್ಲ? ನಾನಂದಿದ್ದಕ್ಕೆ ಸಾಲ ತೀರಿಸ್ಬಿಟ್ರಲ್ಲ? ಸಂತೋಷವಾಯ್ತೋ ಇಲ್ವೋ? ಈಗ್ಹೇಳಿ....ಲಗ್ನ....ಮುಹೂರ್ತ........?

**ಜೋಯಿಸ :**— ಸಂದ್ಯಾವಾಗ್ಲೂ ಒಂದೇ ಲಗ್ನ........ ಪಂಚಮೀ, ಪಂಚಮೀ, ಪಂಚಮೀ. ಏನ್ ನಾರಣಪ್ನೋರೇ?

**ನಾರ :**— ಅಯ್ಯೋ, ನಂದೇನು, ನಮ್ಮ ಸಂಬಂಧ ರಾಯರೊಪ್ಪೋದಾದ್ರೆ, ಅವರು ಹೇಳಿದ್ಹಾಗೆ.

**ಜೋಯಿಸ :**— (ವಿ.ರಾ.ಗೆ) ರಾಯರೇ?

**ವಿ. ರಾ :**— ಸರಿ. ನನ್ನೇನ್ಕೇಳೋದು? ಎಲ್ರೂ ಹ್ಯಾಗ್ಹೇಳಿದ್ರ್ಹಾಗೆ.

**ಜೋಯಿಸ :**— (ಕಮಲನಿಗೆ) ಏನಮ್ಮ?

**ಕಮಲು :**— (ಪಾರ್ವತಿಗೆ) ನಿಮ್ಮ....

**ಪಾರ್ವತಿ :**— ಅಯ್ಯೋ ನಂದೇನು........

**ಕಿಟ್ಟಿ :**— ಯಾರನ್ಕೇಳೋದೂ ಬೇಡ, ಮದ್ವೆ ಮೀನಂದು, ಅವಳ್ನೇ ಕೇಳ್ಬಿಟ್ರೆ ಸರಿ. (ಮೀನಾಗೆ) ಮೀನಾ?

**ಮೀನ :**— ಹೋಗೋ.... (ಒಳಗೋಡುವಳು)

— ಅಂಕದ ತೆರೆ —